ರಸಿಕಚಕ್ರ

ಹಂಪೆಯ ಹರೀಶ್ವರ ಕೃತ

# ಮಲುಹಣದೇವ ಚರಿತೆ



ಸಂಪಾದಕರು :

ಸೌ. ಮಲ್ಲಾಬಾದಿ ಚೆನ್ನಬಸಮ್ಮ

ಶ್ರೀ ಮಲ್ಲಾಬಾದಿ ವೀರಭದ್ರಪ್ಪ

ಪ್ರಕಾಶಕರು :

ಪಂಪಾ ಸಾಹಿತ್ಯ ಪ್ರಕಟನಾಲಯ

ಪ್ರೇಮದ ಬಳ್ಳಿಯ ಬಳಗ, ದಾವಣಗೆರೆ.

ಪ್ರೇಮದ ಬಳ್ಳಿಯ ಬಳಗದ ಆರನೆಯ ಪುಷ್ಪ

—" ಪ್ರೇಮವೇ ದೇವನು "—

ರಸಿಕಚಕ್ರಿ

ಮಹಾಕವಿ ಹಂಪೆಯ ಹರಿಹರದೇವರು

ನಿರೂಪಿಸಿದ

# ಮಲುಹಣದೇವ ಚರಿತೆ

ಸಂಪಾದಕರು:

**ಸೌ॥ ಮಲ್ಲಾಬಾದಿ ಚನ್ನಬಸಮ್ಮ**

**ಶ್ರೀ ಮಲ್ಲಾಬಾದಿ ವೀರಭದ್ರಪ್ಪ**

# ಪ್ರೇಮದ ಬಳ್ಳಿಯು ಬಳಗ ದಾವಣಗೆರೆ

ಕನ್ನಡಸಾಹಿತ್ಯ ಸಂಸ್ಕೃತಿಗಳ ಮಾಧುರ್ಯಪ್ರಕಾಶವನ್ನು ಬೀರುವುದೇ ನಮ್ಮ ಗುರಿ.

## ಮಹಾಪೋಷಕರು

**ಶ್ರೀ ಟಿ. ಎಚ್. ಎಂ. ಸದಾಶಿವಯ್ಯನವರು** ಎಂ. ಎ. ಬಿ. ಎಲ್.

ಹರಪನಹಳ್ಳಿ, ಜಿಲ್ಲಾ ನ್ಯಾಯಾಧೀಶರು ರಾಜಮಹೇಂದ್ರಿ

**ಸೌ॥ ಟಿ. ಎಚ್. ಎಂ. ಸರ್ವಮಂಗಳಕ್ಕನವರು**

## ಪೋಷಕರು

"ಧರ್ಮಪ್ರಕಾಶ" ಶ್ರೀ ಮುರಿಗೆಪ್ಪ ಸಣ್ಣರಾಚಪ್ಪ ಚಿಗಟೇರಿ, ದಾವಣಗೆರೆ

ಶ್ರೀ ಸಿದ್ಧಲಿಂಗಪ್ಪ ಈಶ್ವರಪ್ಪ ಬುಳ್ಳಾ ಗದಗ

ಶ್ರೀ ಸಿದ್ಧಲಿಂಗೇಶ್ವರ ಸೇವಾಧುರೀಣ ಬಿರುದಾಂಕಿತ "ರಗ್ಗಬಿ" ವೀರಪ್ಪ ಲಕ್ಷ್ಮಪ್ಪ ಅಂಗಡಿ ಹಾಗೂ ಮಾತೃಶ್ರೀ ವೀರಬಸವಕ್ಕನವರು ಅಂಗಡಿ ಗದಗ

ಶ್ರೀ ಶರಭಲಿಂಗಪ್ಪ ಚನ್ನಪ್ಪ ಜವಳಿ ಅಡ್ವೋಕೇಟ ಹೈಕೋರ್ಟ, ಮುಂಬೈ

ಸೌ॥ ಚನ್ನಕ್ಕ ಶರಭಲಿಂಗಪ್ಪ ಜವಳಿ, ಮುಂಬೈ

ಶ್ರೀ ಶಿವಪುತ್ರಪ್ಪಣ್ಣಾ ಮಲ್ಲಪ್ಪ ಬಬಲಾದಿ, ಸೌ॥ ಶಿವಗಂಗವ್ವಕ್ಕ ಬಬಲಾದಿ ಹುಕ್ಕೇರಿ

ಶ್ರೀ ಮಹಾಂತಯ್ಯನವರು ಶಾಂತಯ್ಯನವರು ಮುದೇನೂರಮಠ ನಂದವಾಡಗಿ

ಶ್ರೀ ಈಶ್ವರಪ್ಪ ಶಿವಲಿಂಗಪ್ಪ ಉಮರಾಣಿ ರಬಕವಿ, ಧಾರವಾಡ

ಶ್ರೀ ಚನ್ನಪ್ಪಣ್ಣಾ ಬಸಪ್ಪ ಹುರಕಡ್ಲಿ ಲೋಕಾಪುರ, ಗದಗ

ಶ್ರೀ ಸಿದ್ದರಾಮಪ್ಪ ಮಲ್ಲಿಕಾರ್ಜುನಪ್ಪ ತಂಬಾಕೆ ತಾಳಿಕೋಟಿ

ಶ್ರೀ ರುದ್ರಣ್ಣ ಈಶ್ವರಪ್ಪಗೌಡ್ರು ಕೊಟ್ರಿ Chartered Accountant ಹುಬ್ಬಳ್ಳಿ

ಶ್ರೀ ಮಲ್ಲಿಕಾರ್ಜುನಗೌಡಾ ಚನ್ನಬಸವನಗೌಡಾ ಪಾಟೀಲ ಹಳ್ಳಿಯಾಳ ತಾ. ಹುಬ್ಬಳ್ಳಿ

ಶ್ರೀ ಬಸಪ್ಪ ಕುರವತ್ತೆಪ್ಪ ಕುರವತ್ತಿ ರಾಣೇಬೆನ್ನೂರು

ಶ್ರೀ ಚನ್ನಬಸಪ್ಪಣ್ಣ ಪುಟ್ಟಪ್ಪ ಪಾವಲಿ ಅಕ್ಕೀಆಲೂರು

ಶ್ರೀ ಗಂಗಪ್ಪನಾಯಕರು ಮಲ್ಲಪ್ಪನಾಯಕರು ತಟ್ಟಿ ಅಕ್ಕಿಆಲೂರು

ಡಾಕ್ಟರ್ ಬಿ. ಆರ್. ಶಿವಶಂಕರ್, ಶಿವನಿಕೇತನ ದಾವಣಗೆರೆ

---

ರಸಿಕಚಕ್ರಿ

## ಮಹಾಕವಿ ಹಂಪೆಯ ಹರಿಹರದೇವರು

ನಿರೂಪಿಸಿದ

# ಮಲುಹಣದೇವ ಚರಿತೆ



ಮುನ್ನುಡಿಕಾರರು :

ಪ್ರೊಫೆಸರ್ ಪೂಜ್ಯ ಬಸವನಾಳ ಶಿವಲಿಂಗಪ್ಪನವರು ಎಂ. ಎ.

ಸಂಪಾದಕರು

**ಸೌ|| ಮಲ್ಲಾಬಾದಿ ಚನ್ನಬಸಮ್ಮ**

**ಶ್ರೀ ಮಲ್ಲಾಬಾದಿ ವೀರಭದ್ರಪ್ಪ**

ಪ್ರಕಾಶಕರು

ಮಲ್ಲಾಬಾದಿ ಮಹಾಂತಪ್ಪ ಸಹೋದರರು

**ಪಂಪಾ ಸಾಹಿತ್ಯ ಪ್ರಕಟನಾಲಯ**

**ದಾವಣಗೆರೆ**

೧೯೫೭ ] [ ಬೆಲೆ : ಒಂದು ರೂಪಾಯಿ

# ಮುಡುಪು

ಭಾರತರಾಷ್ಟ್ರದ ಆದರ್ಶವಿದ್ಯಾರ್ಥಿಗಳೂ

ಮುಂಬೈರಾಜ್ಯದ ವಿದ್ಯಾಖಾತೆಯ ದಕ್ಷಆಡಳಿತದಲ್ಲಿ

ನಾಮಾಂಕಿತ ಮುಖ್ಯಾಧಿಕಾರಿಗಳೂ

ಕರ್ನಾಟಕ ವಿಶ್ವವಿದ್ಯಾಲಯದ ಉಪಕುಲಪತಿಗಳೂ

ನಮ್ಮ ಪ್ರೊಫೆಸರ ಪೂಜ್ಯ ಬಸವನಾಳರವರ

ಅಚ್ಚುಮೆಚ್ಚಿನ ಗೆಳೆಯರೂ

ವಾತ್ಸಲ್ಯಶೀಲರೂ ಸತ್ಕಾವ್ಯಕೋವಿದರೂ ರಸಜ್ಞರೂ

ಆದ

ರ್‍ಯಾಂಗಲರ್ **ಶ್ರೀ ದಾದಪ್ಪ ಚಿಂತಪ್ಪ ಪಾವಟೆ**

ಎಂ. ಎ. (ಕ್ಯಾಂಟಬ್)

ಹಾಗೂ

ಅವರ ಧರ್ಮಪತ್ನಿ

**ಸೌ|| ಗಿರಿಜಾದೇವಿ ಪಾವಟೆ**

ಈ

ಆದರ್ಶದಂಪತಿಗಳ ದಿವ್ಯಸನ್ನಿಧಿಯಲ್ಲಿ

ಪ್ರೇಮದಬಳ್ಳಿಯ ಬಳಗದವರ ಪರವಾಗಿ

ಮಲ್ಲಾಬಾದಿ ದಂಪತಿಗಳು ಸಲ್ಲಿಸುವ

ಮಮತೆಯ ಕಾಣ್ಕೆ.

# ಪ್ರಕಾಶಕರ ಅರಿಕೆ

ಪ್ರೇಮದ ಬಳ್ಳಿಯ ಬಳಗದ ಆರನೆಯ ಪುಷ್ಪವಾದ ಮಹಾಕವಿ ಹಂಪೆಯ ಹರಿಹರದೇವರು ನಿರೂಪಿಸಿದ ಮಲುಹಣದೇವ ಚರಿತೆಯನ್ನು ಲಿಂಗೈಕ್ಯ ಪ್ರೊಫೆಸರ ಬಸವನಾಳ ಶಿವಲಿಂಗಪ್ಪನವರ ಅಮೃತ ಶಿಲಾಪುತ್ಥಳಿಯ ಅನಾವರಣ ಮಹೋತ್ಸವವು (ದಿನಾಂಕ ೨೬-೧೦-೧೯೫೬ನೆಯ ಶುಕ್ರವಾರ) ಧಾರವಾಡದಲ್ಲಿ ಕರ್ನಾಟಕ ರತ್ನಸಿಂಹಾಸನಾಧೀಶ್ವರರೂ ಮೈಸೂರ ಶ್ರೀಮನ್ಮಹಾರಾಜ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಅವರ ಅಮೃತಹಸ್ತದಿಂದ ಜರುಗಿದ ಶುಭಮುಹೂರ್ತದಲ್ಲಿ ಆ ಮಹಾಕಾರ್ಯದ ಸವಿನೆನಹಿಗಾಗಿ ಪ್ರಕಟಿಸುವ ಯೋಗ ಒದಗಿ ಬಂದದ್ದಕ್ಕಾಗಿ ಆನಂದ.

ಈ ಕೃತಿರತ್ನದ ಪ್ರಕಟನೆಯ ಕಾರ್ಯವು ಜಯಪ್ರದವಾಗಲು ದಾವಣಗೆರೆ ಧರ್ಮಪ್ರಕಾಶ ಶ್ರೀ ಚಿಗಟೇರಿ ಮುರಿಗೆಪ್ಪನವರು, ಶ್ರೀ ಸಿದ್ಧಲಿಂಗೇಶ್ವರ ಸೇವಾ ಧುರೀಣ ಬಿರುದಾಂಕಿತ ಗದುಗಿನ ಶ್ರೀ ವೀರಪ್ಪ ಲಕ್ಷ್ಮಪ್ಪ ಅಂಗಡಿ ಹಾಗೂ ಅವರ ಧರ್ಮಪತ್ನಿ ಮಾತೃಶ್ರೀ ವೀರಬಸವಕ್ಕ ಅಂಗಡಿ ಅವರು ಮತ್ತು ಮುಂಬೈ ಹೈಕೋರ್ಟ ಅಡ್ವೋಕೇಟ್ ಶ್ರೀ ಶರಭಲಿಂಗಪ್ಪ ಚನ್ನಪ್ಪ ಜವಳಿ ಹಾಗೂ ಅವರ ಧರ್ಮಪತ್ನಿ ಸೌ|| ಚನ್ನಕ್ಕ ಜವಳಿ ಅವರು ಸಾಹಿತ್ಯಕಲಾ ಪ್ರೇಮಿಗಳಾದ ಶ್ರೀ ಸಿದ್ದಲಿಂಗಪ್ಪ ಈಶ್ವರಪ್ಪ ಬುಳ್ಳಾ ಗದಗ ಅವರು ಸಹಾಯವೇ ಕಾರಣವಾಗಿದೆ. ಆವರೆಲ್ಲರಿಗೆ ಚಿರಋಣಿಗಳಾಗಿದ್ದೇವೆ. ಪ್ರೇಮದ ಬಳ್ಳಿಯಬಳಗದ ಪೋಷಕರಾದ ಅವರೆಲ್ಲರಿಗೆ ಜಗತ್ತಿನ ಮಾತಾಪಿತೃಗಳಾದ ಶ್ರೀ ಪಂಪಾಬಿಕೆ ವಿರೂಪಾಕ್ಷರು ಸನ್ಮಂಗಳವನ್ನೀಯಲಿ. ಚಿರಋಣಿಗಳಾಗಿದ್ದೇವೆ.

ಅಂದವಾಗಿಯೂ ಸಕಾಲದಲ್ಲಿಯೂ ಮುದ್ರಿಸಿಕೊಟ್ಟ ಧಾರವಾಡ ತೋಂಟದಾರ್ಯ ಮುದ್ರಣಾಲಯದ ಮೇಲ್ವಿಚಾರಕರಾದ ಶ್ರೀ ವೀರಭದ್ರಪ್ಪ ಕೊಪ್ಪಳ ಅವರಿಗೂ ವ್ಯವಸ್ಥಾಪಕರಾದ ಶ್ರೀ ಗುರುಬಸಪ್ಪ ಹಳಕಟ್ಟಿ ಅವರಿಗೂ ಅಚ್ಚುಕೂಟದ ಕೆಲಸಗಾರರಿಗೂ ನಮ್ಮ ಧನ್ಯವಾದಗಳನ್ನು ಸಲ್ಲಿಸುತ್ತೇವೆ. ಕೆಚ್ಚೆದೆಯ ಕನ್ನಡಿಗತನದ ಸಹಜರಸಿಕತೆಯ ಕುಶಲತೆಯಿಂದ ಈ ಗ್ರಂಥವನ್ನು ಓದುವ ವಾಚಕರಿಗೆ ನಮ್ಮ ಹೃತ್ಪೂರ್ವಕ ಅಭಿನಂದನೆಗಳನ್ನು ಸಲ್ಲಿಸದೆ ಇರಲಾರೆವು.

ದಾವಣಗೆರೆ
೨೬-೧೦-೧೯೫೬

**ಮಲ್ಲಾಬಾದಿ ಮಹಾಂತಪ್ಪ**
ಸಹೋದರರು

# ಪರಿವಿಡಿ







# ಮುನ್ನುಡಿ

ದಾವಣಗೆರೆಯ ಪ್ರೇಮದ ಬಳ್ಳಿಯ ಬಳಗದ ಕಾರ್ಯದರ್ಶಿಗಳಾದ ಶ್ರೀಮಾನ್ ಮಲ್ಲಾಬಾದಿ ವೀರಭದ್ರಪ್ಪನವರು ಪ್ರೇಮಪೂರ್ವಕವಾಗಿ ಪ್ರಕಟಿಸಿದ ಮಹಾಕವಿ ಹರಿಹರದೇವ ವಿರಚಿತವಾದ "ಮಲುಹಣದೇವನ" ರಗಳೆಗೆ ಈ ಪುಟ್ಟ ಮುನ್ನುಡಿಯನ್ನು ಬರೆಯುವ ಸುಯೋಗ ಬಂದದ್ದಕ್ಕೆ ಬಹಳ ಸಂತೋಷ ವಾಗುತ್ತದೆ. ಸಾಹಿತ್ಯ ದೃಷ್ಟಿಯಿಂದ, ಮತದೃಷ್ಟಿಯಿಂದ, ಕಲಾದೃಷ್ಟಿಯಿಂದ, ಹರಿಹರದೇವನ ರಗಳೆಗಳು ಕರ್ನಾಟಕ ಸಾಹಿತ್ಯದಲ್ಲಿ ಉಚ್ಚತಮವಾದ ಸ್ವತಂತ್ರ ಸ್ಥಾನವನ್ನು ದೊರಕಿಸಿವೆ. ಶಿವಶರಣರ ಜೀವನ ಚರಿತ್ರೆಗಳಲ್ಲಿದ್ದ ವೈವಿಧ್ಯವನ್ನು ಚೆನ್ನಾಗಿ ತೋರಿಸುವ ಈ ರಗಳೆಗಳು ಇದುವರೆಗೆ ಸಂಪೂರ್ಣವಾಗಿ ಪ್ರಕಟವಾಗವೆ ಇರುವುದು ಕನ್ನಡಿಗರ ದುರ್ದೈವವೇ ಸರಿ. ಆದರೂ ಇತ್ತೀಚೆಗೆ ಅನೇಕ ರಗಳೆಗಳು ಕ್ರಮೇಣ ಪ್ರಕಟವಾಗುತ್ತಲಿರುವುದು ಆಶಾಜನಕ ಸಂಗತಿಯಾಗಿದೆ.

ಪ್ರಸ್ತುತ ಪ್ರಕಟವಾದ ಈ ಮಲುಹಣದೇವನ ರಗಳೆಯು ಹರಿಹರದೇವನ ಅಮೋಘ ಕವಿತಾಶಕ್ತಿಯ ದ್ಯೋತಕವಾಗಿದೆ. ಪ್ರತಿಯೊಂದು ರಗಳೆಯಲ್ಲಿಯೂ ಭಕ್ತಿರಸವು ಪ್ರಧಾನಭೂತವಾಗಿದ್ದರೂ ಒಂದೊಂದರಲ್ಲಿ ಒಂದೊಂದು ರಸವು ಆಧೀನಭೂತವಾಗಿರುವುದು ಈ ಮಹಾಕವಿಯ ಕೃತಿಗಳಲ್ಲಿ ಕಾಣುವ ವೈಶಿಷ್ಟ್ಯ. ಅದರಂತೆ ಈ ರಗಳೆಯಲ್ಲಿ ಶೃಂಗಾರವು ಅಧೀನರಸವಾಗಿದೆ. ಆದರೂ ಇದರಲ್ಲಿ ಶೃಂಗಾರರಸವು ಭಕ್ತಿರಸಕ್ಕೆ ಯಾವ ವಿಧದಿಂದಲೂ ಭಂಗತಾರದೆ ಪೋಷಕ ವಾಗಿಯೇ ಇದೆ. ಮರ್ಯಾದೆ ಮೀರದೆ ಮೃದುಮಧುರವಾಗಿ ಶೃಂಗಾರವನ್ನು ಹೇಗೆ ವರ್ಣಿಸಲು ಬರುತ್ತದೆಂಬುದು ಈ ಗ್ರಂಥದಲ್ಲಿ ಕಾಣುತ್ತದೆ.

ಈ ರಗಳೆಯ ಶೋಧನ ಕಾರ್ಯವನ್ನು ಶ್ರೀಮಾನ್ ಮಲ್ಲಾಬಾದಿ ವೀರಭದ್ರಪ್ಪನವರು ಕೈಕೊಂಡು ಚೆನ್ನಾಗಿ ಪೂರೈಸಿರುವರೆಂಬುದನ್ನು ಇಲ್ಲಿ ಹೇಳಬೇಕಾಗಿಲ್ಲ. ಹರಿಹರದೇವನ ರಗಳೆಗಳ ಮಹಾಸಾಗರದಲ್ಲಿದ್ದ ಇನ್ನುಳಿದ ರತ್ನಗಳನ್ನು ಒಂದೊಂದಾಗಿ ಆಯ್ದು ಈ ಪ್ರೇಮದ ಬಳ್ಳಿಯ ಬಳಗದವರು ಒಳ್ಳೆಯ ಅಚ್ಚುಮೆಚ್ಚಾಗಿ ಮುದ್ರಿಸುವರೆಂದು ಹಾರೈಸುತ್ತೇನೆ.

ಲಿಂಗರಾಜ ಕಾಲೇಜ
ಬೆಳಗಾವಿ
ದಿ. ೨೬-೧೧-೧೯೩೫

**ಶಿ. ಶಿ. ಬಸವನಾಳ**

ಓಂ

*Happy Message from His Holiness*

**Pandit Gowri-Shankara Mahaswamiji**

MYSORE PALACE PANCHA GAVIMATH, MYSORE.

# LOVE

Think love, drink love, eat love, dream love,— then your life will be beautiful, glorious and sublime. Live in the paradise of love; soar in the crystalline air of love. Swim in shoreless sea of love. Walk in the eternal rose-garden of love. Perfume your nostrils with the sweet fragrance of the flowers of love. Familiarize your ears with soule entrancing melodies of love. Let your ideals be a bouquet of love. Acquire love and more love. Be a centre of love and a heaven of love.

2—2—1952

## ಪ್ರೇಮಸಂದೇಶ

" ಒಲುಮೆಯನೆ ಧ್ಯಾನಿಸು, ವಿಚಾರಿಸು, ಒಲುಮೆಯನೆ ಕುಡಿ, ಒಲುಮೆಯನೀಂಟು, ಕನಸಿನೊಳು ಒಲುಮೆಯನೆ ಕಾಣು; ಅಂದರೆ ನಿನ್ನ ಜೀವನವು ಸುಂದರವು, ವೈಭವಯುತವೂ ಉನ್ನತವೂ(ಕಂಪಿತವೂ) ಆಗುವದು. ನಲ್ಮೆಯ ಸ್ವರ್ಗದೊಳು ವಾಸಮಾಡು; ಪ್ರೀತಿಯ ಸ್ಫಟಿಕ ಮಯ ಗಾಳಿಯೊಳು ಮೇಲೇರಿಪೋಗು; ದಡವಿಲ್ಲದ ಕಡಲೆಂಬ ನಲುಮೆ ಯೊಳು ಈಸು; ಚಿರಂತನವಾದ ಪ್ರಣಯ ಪ್ರಮದೋದ್ಯಾನದೊಳು ಚರಿಸಾಡು; ನಲುಮೆಯ ಕುಸುಮದ ಸುಗಂಧವನೆ ವಾಸಿಸು, ಹೃದಯ ಸ್ಪರ್ಶ ಪ್ರಣಯ ಗಾನಗಳನೇ ಕೇಳು; ನಿನ್ನ ಉಚ್ಚತಮಧ್ಯೇಯಗಳು ನಲುಮೆಯ ಕಂಪಿನಹೂವಿನತುರಾಯಿಯಾಗಲಿ; ಹೆಚ್ಚೆಚ್ಚು ನಲುಮೆ ಯನು ಸಂಪಾದಿಸು. ಪ್ರೇಮ ಸ್ವರ್ಗದ ಕೇಂದ್ರವಾಗಿ ನೀ ಬಾಳು."

# ಪ್ರಸ್ತಾವನೆ

“ ಅರಸಿತೊಳಲಿದರಿಲ್ಲ, ಬಯಸಿಪೊಕ್ಕರಿಲ್ಲ, ತಪಸ್ಸುಮಾಡಿದರಿಲ್ಲ;
ಅದು ತನ್ನ ಮಹಾಕಾಲಕ್ಕಲ್ಲದೆ ಸಾಧ್ಯವಾಗದು,
ಶಿವನೊಲಿದಲ್ಲದೆ ಕೈಗೂಡದು;
ಚನ್ನಮಲ್ಲಿಕಾರ್ಜುನನೆನಗೊಲಿದನಾಗಿ
ನಾನು ಸಂಗನಬಸವಣ್ಣನ ಶ್ರೀಪಾದವ ಕಂಡು ಬದುಕಿದೆನು ”

—ತತ್ವಶಿಖಾಮಣಿ ಶ್ರೀ ಮಹಾದೇವಿ ಅಕ್ಕನವರು

# ನಿವೇದನೆ

ಮೇಲಣ ವಚನದ ಪರಿಣಾಮವೇ ಈ ಪ್ರಸ್ತಾವನೆಗೆ ಪೀಠಿಕೆಯಾಗಿದೆ. ಸುಮಾರು ೨೫ ವರ್ಷಗಳ ಹಿಂದೆ ಶಿವಾನುಭಾವದಲ್ಲಿ ಬಲ್ಲಿದರೂ ನಿಜಗುಣರ ಶಾಸ್ತ್ರದಲ್ಲಿ ನಿಷ್ಣಾತರೂ ಆದ ನನ್ನ ಪೂಜ್ಯತಂದೆ ಮಹಾಲಿಂಗಪ್ಪನವರು ನನ್ನ ಕೈಯಲ್ಲಿ ಒಂದು ತಾಡವಾಲೆ ಗ್ರಂಥವನ್ನು ಕೊಟ್ಟರು. ರಾಜಕೀಯ ಪರಿಸ್ಥಿತಿಯಿಂದ ಹೈಸ್ಕೂಲ್ ವ್ಯಾಸಂಗದಲ್ಲಿ ಉತ್ತೀರ್ಣನಾಗದೆ ಗುರವರ ಶ್ರೀ ಲಕ್ಷ್ಮಣರಾವ ಹೊಯಿಸಳರ ಸಾನ್ನಿಧ್ಯದಲ್ಲಿ ಹಿಡಿದ ಕನ್ನಡದ ಹುಚ್ಚು ಹೆಚ್ಚಾಗಿದ್ದಿತು. ಜೀವನ ಸಾಗಿಸಲು ಹಾಜಿಗನಿ ಮೂಸಾಸೇಠರ ಅಂಗಡಿಯಲ್ಲಿ ಕರಣಿಕನಾಗಿ ಸೇರಿದೆ. ಬಿಡುವುಸಿಕ್ಕಾಗ ಆ ವಾಲೆಗಳನ್ನು ಒಂದೊಂದಾಗಿ ಓದುತ್ತಿರುವಾಗ ಈ ಮಲುಹಣದೇವನ ಕಥೆ ದೊರಕಿತು. ನನ್ನ ಜೀವನದ ಅಮೃತದ ಸಸಿಯ ಮೇಲೆ ಸವಿಯ ಬಳ್ಳಿಹಬ್ಬಿದಂತೆ ಆಯಿತು. ಆಗಲೇ ಅದನ್ನು ಎತ್ತಿ ಬರೆದೆನು. ದಾವಣಗೆರೆಗೆ ಶ್ರೀ ಬಸವಜಯಂತಿಯಲ್ಲಿ “ಷಟ್‌ಸ್ಥಳಗಳು” ಎಂಬ ವಿಷಯವನ್ನು ಕುರಿತು ಭಾಷಣ ಮಾಡಲು ಬಂದಿದ್ದ ನಮ್ಮ ಜಿಲ್ಲೆಯವರೇ ಆದ ಪ್ರೊಫೆಸರ್ ಟಿ. ಎಸ್. ವೆಂಕಣ್ಣಯ್ಯನವರಿಗೆ ತೋರಿಸಿದೆನು. “ಆಹಾ! ಎಷ್ಟೊಂದು ರಮ್ಯವಾಗಿದೆ, ಬಹಳ ಒಳ್ಳೇ ಕೆಲಸಮಾಡಿದ್ದೀರಿ” ಎಂದರು. ಪಾಠಾಂತರಗಳನ್ನು ಗುರಿತಿಸಿ ಕೊಡಲು ಕೇಳಿಕೊಂಡೆನು. ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚ್ಯ ಕೋಶಾಗಾರದಲ್ಲಿರುವ ಹಂಪೆಯ ಹರಿಹರದೇವನ ಕೃತಿಗಳೊಡನೆ ಇದನ್ನು ಹೋಲಿಸಿ ನೋಡಿ ತಿದ್ದಿ ಪಾಠಾಂತರ ಹಾಕಿ ಕಳಿಸಿಕೊಟ್ಟರು; ಅಂದಿನಿಂದ ಕನ್ನಡಭಾಷಾ ಪ್ರೇಮವು ಹಾಗೂ ಹುರುಪು ಹುಮ್ಮಸ್ಸು ಹೆಚ್ಚಾಯಿತು.

# ದಾವಣಗೆರೆಯಲ್ಲಿ ಪೂಜ್ಯ ಬಸವನಾಳರು

ಬೆಂಗಳೂರು ಸೆಂಟ್ರಲ್ ಕಾಲೇಜ ಕರ್ನಾಟಕ ಸಂಘದ ವಾರ್ಷಿಕೋತ್ಸವ ವನ್ನು ಮುಗಿಸಿ ದಾವಣಗೆರೆಗೆ ಆಗಮಿಸಿದ್ದ ಕನ್ನಡನಾಡಿನ ಸುಪ್ರಸಿದ್ಧ ವಿದ್ವಾಂಸ ರಾದ ಪ್ರೊ. ಶಿ. ಶಿ. ಬಸವನಾಳರವರ ಅಧ್ಯಕ್ಷತೆಯಲ್ಲಿ ಶ್ರೀ ಬಾದಾಮಿ ಶಿವಬಸಪ್ಪನವರ ಮಹಡಿಯ ಮೇಲೆ ಪ್ರೇಮದ ಬಳ್ಳಿಯ ಬಳಗದ ವಾರ್ಷಿಕಾಧಿ ವೇಶನ ಹಾಗೂ ವಚನವಾಙ್ಮಯದ ಸಮ್ಮೇಳನವನ್ನು ಸಾಹಿತ್ಯಪ್ರೇಮಿಗಳಾದ ತರುಣ ಕಾರ್ಯಕರ್ತರು ಸೇರಿ ೧೯೩೪ರಲ್ಲಿ ನೆಡೆಯಿಸಿದೆವು. ಆಗ ಈ ಮಲುಹಣ ದೇವನ ಚರಿತ್ರೆಯನ್ನು ಶ್ರೀ ಬಸವನಾಳರವರ ಸನ್ನಿಧಿಯಲ್ಲಿ ಓದಿದೆನು. ಅವರ ಅತಿ ಸಹಜವಾದ ಉನ್ನತಮಟ್ಟದ ರಸಿಕತನಕ್ಕೆ ಪೋಷಕವಾಯಿತೋ ಏನೋ " ಈ ಪ್ರೇಮದ ಬಳ್ಳಿಯು ನನ್ನ ಸುತ್ತುವರಿದು ಕುಡಿವರೆದು ಕವಲಿಡಿದು ಹಬ್ಬ ತೊಡಗಿತು." ಎಂದು ಈ ಕಾರ್ಯವನ್ನು ಮೆಚ್ಚಿ ಕೆಲವು ತಿದ್ದುಪಡಿಗಳನ್ನು ಸೂಚಿಸಿ ಮುನ್ನುಡಿ ಬರೆದು ಆಶೀರ್ವದಿಸಿದರು. ಪ್ರೇಮದ ಬಳ್ಳಿಯ ಬಳಗದ ಮಹಾಪೋಷಕರೂ ಚತುರ್‌ಭಾಷಾಪಂಡಿತರೂ ಆದ ಶ್ರೀ ಟಿ. ಎಚ್. ಎಂ. ಸದಾಶಿವಯ್ಯನವರು ನಮಗೆ ಕನ್ನಡದಲ್ಲಿ ಹಂಪೆಯ ಹರೀಶ್ವರ ಹಾಗೂ ಆಂಧ್ರ ದಲ್ಲಿ ಪಾಲ್ಕುರಿಕೆ ಸೋಮನಾರಾಧ್ಯ ಇವರೀರ್ವರೂ ಆಯಾ ಸಾಹಿತ್ಯದಲ್ಲಿ ಕೃಷಿಗೈದ ಮಹತ್ವವನ್ನು ತಿಳಿಸುತ್ತ ಉಭಯರೂ ಕಾವ್ಯದ ಉದ್ದೇಶವನ್ನು ಸಾಹಿತ್ಯಮುಖವನ್ನು ಬದಲಾಯಿಸಿದ ರಾಷ್ಟ್ರಕವಿಗಳೆಂದು ಪರಿಚಯ ಮಾಡಿ ಕೊಟ್ಟರು. ನಿತ್ಯಜೀವನ ಸಾಗಿಸುವ ಕರಣಿಕವೃತ್ತಿ ಬದಲಾವಣೆ ಹೊಂದಿ ದಾವಣಗೆರೆ ಸುಪ್ರಸಿದ್ಧ ವರ್ತಕರಾದ ಶ್ರೀ ಬ್ರಹ್ಮಪ್ಪ ತವನಪ್ಪನವರಲ್ಲಿ ಮತ್ತೆ ಅದೇ ಕರಣಿಕ ಕಾಯಕವನ್ನು ಕೈಕೊಂಡೆನು. ನನ್ನ ಸಾಹಸ ಸ್ವಭಾವಕ್ಕೆ ಅನುಗುಣವಾಗಿ ( Export & Import Duty ) ಕಾಯಕ ನೇಮಿಸಿದರು. ನನ್ನ ವಿಭಾಗದ ಮುಖ್ಯಸ್ಥರಾದ ಶ್ರೀ ಬೇತೂರು ಕುಬೇರಣ್ಣನವರು ಸಹಾ ನನ್ನ ನಾದದವರೇ ಆಗಿದ್ದುದರಿಂದ ನಮಗೆ ಬಿಡುವಾದಾಗಲೆಲ್ಲ ಒಮ್ಮೆ ಜೈನ ಸಾಹಿತ್ಯದ ವಿವೇಚನೆ ಒಮ್ಮೆ ವೀರಶೈವ ಸಾಹಿತ್ಯದ ವಿವೇಚನೆ,ಅವಕ್ಕೆ ಪೋಷಕ ವಾದ ಗ್ರಂಥಗಳನ್ನು ತರಿಸುವುದು; ಹಾಗೆಯೇ ಪರಸ್ಪರ ತಾತ್ವಿಕವಿವೇಚನೆ ಮಾಡುತ್ತಿದ್ದುದರಿಂದ ನನ್ನಲ್ಲಿ ಹುದುಗಿದ್ದ ಕನ್ನಡ ಸಾಹಿತ್ಯಾಭಿಮಾನವು ಒಮ್ಮೆ ಅನಿರೀಕ್ಷಿತವಾಗಿ ಪ್ರಕಟವಾಯಿತು.

ವರ್ಷಕ್ಕೊಮ್ಮೆ ನಡೆಯುವ ಸಾಹಿತ್ಯ ಸಮ್ಮೇಳನಗಳಲ್ಲಿ ಪ್ರಬಂಧವಾಚನ ಮಾಡಲು ಅವಕಾಶ ಸಿಕ್ಕಾಗಲೆಲ್ಲ ನನಗೆ ಹೋಗಿಬರಲು ನನ್ನ ಧಣಿಯರಾದ ಶ್ರೀ ತವನಪ್ಪನವರ ಚಂದ್ರಣ್ಣನವರು, ನನ್ನ ಬಾಲ್ಯಸ್ನೇಹಿತರೂ, ಕ್ಷಮಾಗುಣ ಶೀಲರೂ, ಆದ ಚಿಕ್ಕಧಣಿ ಶ್ರೀ ಟಿ. ಸುಬ್ಬಣ್ಣನವರು ಕಾಯಕಕ್ಕೆ ಕುಂದುತಾರದೆ ನನ್ನ ಸಾಹಿತ್ಯಸೇವೆಗೆ ಮೆಚ್ಚಿದುದಲ್ಲದೆ ಅವರ ಸಹೋದರ ಶ್ರೀ ನಾಭಿರಾಜರು ಬಹು ವಾತ್ಸಲ್ಯದಿಂದ ನನ್ನ ಸೇವೆಯನ್ನು ತೆಗೆದುಕೊಳ್ಳುತ್ತಿದ್ದರು. ಅವರಿಗೆ ಬಿಡುವು ದೊರೆತಾಗ ಶ್ರೀ ಪದ್ಮಾವತಿದೇವಿ ಶ್ರೀ ಜಿನದತ್ತರಾಜನ ಚರಿತ್ರೆ ಸಮವಶರಣಸಿದ್ಧಾಂತ, ಭರತೇಶವೈಭವದಲ್ಲಿ ಬರುವ ಸುಂದರ ಸನ್ನಿವೇಶ, ಜೀವದಯಾನೋಂಪಿಯ ಕಥೆ ಹೇಳುತ್ತ ಹೇಳುತ್ತ ಈ ರೀತಿಯಲ್ಲಿ ರೂಪಗೊಂಡು ಪೋಷಣೆಗೊಂಡ ಕನ್ನಡ ಭಾಷಾಬೆಳವಣಿಗೆಯ ಹಂಬಲದಿಂದ ತುಂಬಿ ಮಹಾ ಕವಿ "ಹಂಪೆಯ ಹರಿಹರದೇವನ ಕಾವ್ಯಗಳ ಮಾಧುರ್ಯ ಹಾಗೂ ಪ್ರಕಾಶ" ಎಂಬ ಪ್ರಬಂಧವನ್ನು ಕ್ರಿ. ಶ. ೧೯೩೫ರಲ್ಲಿ ಬೊಂಬಾಯಿ 'ಸರ್. ಕೌಂಸೀ ಜಹಾಂಗೀರ' ಭವನದಲ್ಲಿ ನಡೆದ ಇಪ್ಪತ್ತೊಂದನೆಯ ಸಾಹಿತ್ಯಸಮ್ಮೇಳನದಲ್ಲಿ ಓದಿದೆನು. ಧೈರ್ಯವೂ ಉತ್ಸಾಹವೂ ಅಧಿಕವಾಯಿತು.

ನಮ್ಮ ಶರಣರ ಕಾಯಕ ತತ್ವದ ಸ್ವಾವಲಂಬನದ ಬಲದಿಂದ ದಿನಾಂಕ ೪-೩-೧೯೩೭ರಲ್ಲಿ ನಮ್ಮ ನೆಂಟರಾದ ಹುಬ್ಬಳ್ಳಿ ತೀ|| ಮಿರ್ಜಿ ಮಹಾಲಿಂಗಪ್ಪ ನವರು ನಡೆಸಿದ ತಮ್ಮ ಐವರು ಮೊಮ್ಮಕ್ಕಳ ಮದುವೆಯ ಸಮಾರಂಭದಲ್ಲಿ ಶ್ರೀ ಮಿರ್ಜಿವಕೀಲರು ಅವರ ಧರ್ಮಪತ್ನಿಯರೂ ನನ್ನ ಏಕಮಾತ್ರ ಸಹೋದರಿ ಯರೂ ಆದ ಸೌ|| ಗುರುಶಾಂತಕ್ಕನವರೂ ಇದೇ ಮುಹೂರ್ತದಲ್ಲಿ ತಮ್ಮ ತಮ್ಮನ ಮದುವೆಯನ್ನು ಮಾಡಿ ಕೊಡಬೇಕೆಂದು ನನ್ನ ಕಲ್ಯಾಣಮಾಡಿದರು. ವಿದ್ಯಾಭಿವೃದ್ಧಿಗೆ, ನಾನು ಮುಂದುವರಿಯಲಿಕ್ಕೆ ನನ್ನ ನಿರಂತರ ಹಿತಾಭಿಲಾಷಿ ಗಳಾಗಿದ್ದ ಶ್ರೀ ಅಂದನೂರು ಕೊಟ್ರಬಸಪ್ಪನವರ ಮಕ್ಕಳು ಚನ್ನವೀರಣ್ಣ ಹಾಗು ಶಿವಯೋಗಪ್ಪ ಅವರ ಉಪಕಾರವು ಅಷ್ಟಿಷ್ಟಲ್ಲಾ. ಅವರು ಅಕಾಲದಲ್ಲಿ ಅಗಲಿ ಹೋದರು. ಅಷ್ಟರಲ್ಲಿ ಸಾಹಿತ್ಯಸೇವೆಗಾಗಿ ಪ್ರೊಫೆಸರ ಪೂಜ್ಯ ಬಸವನಾಳರು ಧಾರವಾಡ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ ಸಾಹಿತ್ಯಸಮಿತಿಗೆ ನನ್ನನ್ನು ಸದಸ್ಯನನ್ನಾಗಿ ಆರಿಸಿಕೊಂಡು ಒಂದುದಿನ ನನ್ನ ತಂದೆಯವರಿಗೆ "ವೀರಭದ್ರಪ್ಪ ನನ್ನು ನಮ್ಮ ಜೊತೆಯಲ್ಲಿ ಧಾರವಾಡಕ್ಕೆ ಕಳಿಸಿಕೊಡಿರಿ ಅಲ್ಲಿ ಬಹಳ ಕಾರ್ಯ

ಮಾಡುವುದಿದೆ" ಎಂದು ಸೂಚನೆಕೊಡಲು ಅದಕ್ಕೆ ಸಂತೋಷದಿಂದ ಒಪ್ಪಿ "ಎಲ್ಲರಲ್ಲಿಯೂ ವಿನಮಿತ ಭಾವದಿಂದ ವರ್ತಿಸು, ಉಪಕಾರಿಗಳನ್ನು ಸದಾ ಸ್ಮರಿಸುತ್ತಿರು, ಶಿವಭಕ್ತಿಯನ್ನು ಮರೆಯಬೇಡ" ಎಂದು ಆಶೀರ್ವದಿಸಿ ಕಳಿಸಿ ಕೊಟ್ಟರು. ದಿನಾಂಕ ೧-೪-೧೯೪೧ರಿಂದ ಧಾರವಾಡ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಸಾಹಿತ್ಯಸಮಿತಿಯ ಪ್ರಚಾರಾಧಿಕಾರಿಯಾಗಿ ನೇಮಿಸಲ್ಪಟ್ಟೆನು. ಅಂದಿನಿಂದ ಪೂಜ್ಯ ಬಸವನಾಳರ ಸಾನಿಧ್ಯದಲ್ಲಿರುವ ಭಾಗ್ಯ ನಿತ್ಯಜೀವನದಲ್ಲಿ ಮಿಗಿಲಾದ ಭಾಗ್ಯವಾಗಿ ಪರಿಣಮಿಸಿತು. ಅದಕ್ಕೆ ನಿರಂತರ ಪೋಷಕವಾಗಿ ತ್ರಿವಿಧದಾಸೋಹಮೂರ್ತಿಗಳೂ ಶರಣಸಂಸ್ಕೃತಿಯ ಅಮೃತಕಿರಣ ಸ್ವರೂಪರೂ ಆದ ಶ್ರೀಮನ್ನಿರಂಜನ ಪ್ರಣವಸ್ವರೂಪ ಮೃತ್ಯುಂಜಯ ಮಹಾಸ್ವಾಮಿಗಳವರ ಕೃಪಾಪೂರ್ಣ ಆಶ್ರಯ ದೊರೆತ ಮೇಲೆ ಇನ್ನು ಮಿಗಿಲುಂಟೇ? ನನ್ನ ಚಿರಪರಿಚಿತರಾದ, ಹರಿಹರದಿಂದ ಬಂದು ನನಗೂ ಮೊದಲು ಧಾರವಾಡದಲ್ಲಿ ಶ್ರೀ ಬಸವನಾಳರ ನೆರವಿನಿಂದ ನೆಲಸಿದ್ದ ಶ್ರೀ ಗದ್ದಿಗೀಮಠದ ಮುರಿಗೆಪ್ಪನವರ ವಿರೂಪಾಕ್ಷಣ್ಣನವರ ಜೊತೆಯಿಂದ ಸಾಹಿತ್ಯಕ್ಷೇತ್ರದಲ್ಲಿಯ ಸಮಾಜಕಾರ್ಯ ದಲ್ಲಿಯೂ ಶಿವಾನುಭವಗೋಷ್ಠಿಗಳಲ್ಲಿಯೂ ಸಾರ್ವಜನಿಕ ರಂಗದಲ್ಲಿಯೂ ಸರ್ವ ಧರ್ಮಪರಿಷತ್ತುಗಳಲ್ಲಿಯೂ ಸಾಕಷ್ಟು ಸೇವೆ ಸಲ್ಲಿಸುವ ಅವಕಾಶ ಉಂಟಾಯಿತು.

ಮಲುಹಣದೇವನ ಚರಿತೆಯನ್ನು ಮುದ್ರಣಕ್ಕೆ ಅಣಿಮಾಡಿ ಪ್ರಕಟ ಗೊಳಿಸಲು ಯಾವುದಕ್ಕೂ ಅಭಾವವಿಲ್ಲವಾದಾಗ್ಯೂ ಸಹ ಮಾಡೋಣ, ಮಾಡಿ ಸೋಣ ಎಂದು ಹೀಗೆಯೇ ಹದಿನೈದು ವರ್ಷಗಳು ಗತಿಸಿದವು. ಶಿವಾಜ್ಞೆಯಿಂದ ದಿನಾಂಕ ೨೨-೧೨-೧೯೫೮ರಲ್ಲಿ ಪ್ರೊ. ಪೂಜ್ಯ ಬಸವನಾಳರು ಅಗಲಿದರು. ತಾಯಿಯನ್ನು ಕಳೆದುಕೊಂಡ ತಬ್ಬಲಿಯಂತೆ ಸಾಹಿತ್ಯಪ್ರಪಂಚದಲ್ಲಿ ಆದೆವು. ಮತ್ತೆ ಐದು ವರ್ಷಗಳು ಸಂದಿದವು. ಹರೀಶ್ವರಕೃತ ಪುರಾತನಮಾತೆಯರ ಚರಿತ್ರೆ ಹಾಗೂ ಬಸವತತ್ವಪರಿಮಳ ಈ ಎರಡು ಗ್ರಂಥಗಳು ಪ್ರಕಟಗೊಂಡರೂ ಮಲುಹಣದೇವನ ಚರಿತ್ರೆ ಪಕಟವಾಗಲಿಲ್ಲ. ಯಾವುದಕ್ಕೂ ಯೋಗಬೇಕಲ್ಲವೆ? ವಿದ್ಯಾಭ್ಯಾಸಕ್ಕಾಗಿ ಹಾನಗಲ್ಲ ತಾಲೂಕು ಹಾವಣಗಿಯಿಂದ ಚಿಕ್ಕಂದಿನಲ್ಲಿಯೇ ಬಂದ ನಮ್ಮ ಅಳಿಯ ಚಿ|| ಬಸವರಾಜ ಚನ್ನವೀರಪ್ಪ ಜವಳಿ ಬಿ. ಎ. (ಆನರ್ಸ) ಈತನ ಪ್ರೋತ್ಸಾಹ ಹಾಗೂ ವಿದ್ವಾನ್ ಶಂಕರನಾರಾಯಣ ಮಹಾಬಲೇಶ್ವರ ಕೇಪು ಅವರಿಬ್ಬರ ಸಹಾಯ ಮಲ್ಲಾಬಾದಿ ದಂಪತಿಗಳಿಗೆ ಈ ಪವಿತ್ರ ಕಾವ್ಯದ ಸಂಪಾದನೆಯ ಕಾರ್ಯದಲ್ಲಿ ಬಹಳವಾಗಿದೆ.

ಕಳೆದ ಇಪ್ಪತ್ತು ವರ್ಷಗಳ ಅವಧಿಯಲ್ಲಿ ರಸಿಕಚಕ್ರಿ ಹರಿಶ್ವರನ ಈ ಕೃತಿಯು ಸಹೃದಯರಾದ ಕನ್ನಡಿಗರ ಮನವನ್ನು ಬಹುವಾಗಿ ಆಕರ್ಷಿಸಿರುವುದು. ಮೈಸೂರು ವಿಶ್ವವಿದ್ಯಾಲಯದ ಕರ್ನಾಟಕ ಸಂಘದಲ್ಲಿ, ಹೈದರಾಬಾದ ಉಸ್ಮಾನಿಯಾ ವಿಶ್ವವಿದ್ಯಾಲಯದ ಕರ್ನಾಟಕ ಸಂಘದಲ್ಲಿ, ಧಾರವಾಡ ಕರ್ನಾಟಕ ವಿದ್ಯಾವರ್ಧಕಸಂಘದಲ್ಲಿ, ನಾಡಹಬ್ಬಗಳಲ್ಲಿ ಬೆಂಗಳೂರು ವೀರಶೈವ ಸಮಾಜಸೇವಾ ಸಂಘದವರು ಏರ್ಪಡಿಸುತ್ತಿರುವ ಶ್ರೀ ಬಸವಜಯಂತಿಯ ಮಹೋತ್ಸವದಲ್ಲಿ, ಅನೇಕ ಆಪ್ತಮಿತ್ರರ ಬಂಧುಬಳಗದವರ ಮದುವೆಯ ಸಮಾರಂಭದಲ್ಲಿ, ತಾಳಿಕೋಟೆ, ಹುನಗುಂದ, ಮುದ್ದೇಬಿಹಾಳ, ಬಾಗಿಲುಕೋಟೆ, ಮುಧೋಳ, ರಬಕವಿ, ಬನಹಟ್ಟಿ, ನ್ಯಾಮತಿ ತೀರ್ಥ ರಾಮೇಶ್ವರ, ಮುಂತಾದ ಕಡೆಗಳಲ್ಲಿ ರಾಯಚೂರು ಗುಲಬುರ್ಗಾಗಳಲ್ಲಿ, ಬೇಲೂರು ಚಿಕ್ಕಮಗಳೂರಿನಲ್ಲಿ, ಹುಬ್ಬಳ್ಳಿ ಯಲ್ಲಿ, ಬಳ್ಳಾರಿಜಿಲ್ಲಾ ಕನ್ನಡ ನಾಟಕ ಕಲಾಪರಿಷತ್ತಿನಲ್ಲಿ ಹಾಗೂ ಬಳ್ಳಾರಿ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ, ಅನೇಕ ಹಳ್ಳಿಹಳ್ಳಿಗಳಲ್ಲಿ ಕೇರಿ ಕೇರಿ ಗಳಲ್ಲಿ, ಸಂತೋಷಕೂಟದಲ್ಲಿ ಮುಮುಕ್ಷುಗಳಿಗೆ ಉಪದೇಶ ಮಾಡುವಲ್ಲಿ, ಎಲ್ಲಿ ನೋಡಿದಡಲ್ಲಿ **ಮಲುಹಣಿ ಮಲುಹಣರ** ಸೊಲ್ಲೇಸೊಲ್ಲು. ಈ ಕೃತಿರತ್ನದ ಪರಿಚಯ ಮಾಡುತ್ತಿರುವಾಗ ರಸಿಕಜನಮನೋಭಿರಾಮರೂ ಕಲಾಪ್ರೇಮಿ ಗಳೂ ಆದ ಬಳ್ಳಾರಿ ನಗರದ ಮಹಾಜನರೂ ಉತ್ಸಾಹಶೀಲರಾದ ತರುಣರೂ ಈ ಸತ್ಕೃತಿಯನ್ನು ಕೇಳಿ ಪರಿಣಾಮ ಹೊಂದಿ ತಲೆದೂಗಿದಷ್ಟು ಮತ್ತೆ ಯಾವಾಗಲೂ ತಲೆದೂಗಿರುವುದಿಲ್ಲವೆಂದು ಹೇಳಲು ಹೆಮ್ಮೆಪಡುತ್ತೇನೆ.

ಆರಂಭದಲ್ಲಿ ಹೇಳಿದ ವಚನದ ಅನುಭವವನ್ನು ಮನಗಂಡು ಯಾವುದೋ ಗೊತ್ತಾಗದ ಕಾರಣದಿಂದ, ಸಹೃದಯರಾದ ವಾಚಕರ ಜೊತೆಯಲ್ಲಿ ಸಂಪಾದ ಕರ ಕುತೂಹಲ ಕೆರಳಿ ನಿರೀಕ್ಷಣೆ ಮೀರಿ ಉಳಿದುಹೋದ ಪ್ರಕಟನೆಯ ಕಾರ್ಯವು ಶ್ರೀ ಪಂಪಾಂಬಿಕೆ, ವಿರೂಪಾಕ್ಷರೊಲುಮೆಯಿಂದ, ಇಂದು ಪ್ರೇಮದ ಬಳ್ಳಿಯ ಬಳಗದ ಆರನೆಯ ಹೂವಾಗಿ ಅರಳುತ್ತಿದೆ. ಇದನ್ನು ಭಾವದ ಬೆಳಕಿನಲ್ಲಿ ಓದುತ್ತ ರಸಿಕ ಜೀವನವು ಸ್ಫುಟಗೊಳ್ಳಲಿ. ಬಿರುಮುಗುಳಿನಂತಿರುವ ಹೃದಯ ನಳಿನವು ರಸಿಕಚಕ್ರಿ ಹಂಪೆಯ ಹರೀಶ್ವರನ ಕೃತಿಗಳನ್ನು ಓದುವುದರಿಂದ ಅರಳಲಿ, ದೈವಭಕ್ತಿಯು ಪ್ರಜ್ವಲಿಸಲಿ, ಎಂದು ನಮ್ಮ ಹೃದಯದಲ್ಲಿ ಅಂದಿನಿಂದ ಹುದುಗಿದ್ದ ಭಾವವನ್ನು ಈ ರೂಪದಲ್ಲಿ ಇಡುತ್ತಿದ್ದೇವೆ.

# ಶ್ರೀ ಪಂಪಾಕ್ಷೇತ್ರ

### " ದ್ವಾಪರದಲ್ಲಿ ವಿರೂಪಾಕ್ಷನೆಂಬ ಮೂಲಸ್ಥಾನ " ೧

" ಇಪ್ಪರ್ದೀಧರೆಗೆತೊಡವೆನಿಸಿ ಪಂಪಾಪುರಂ
ಸರ್ಪಭೂಷಣಭಾವಭರಿತ ಪಂಪಾಪುರಂ
ಪೆಸರಗೊಂಡರಘವ ನೊಣಗಿಪ ಪಂಪಾಪುರಂ
ಅಸಮಾಕ್ಷ೨ನಲ್ಲಿ ಕೂಡಿಸುವ ಪಂಪಾಪುರಂ
ಸಂದಣಿಸಿ ಬೇಡಿದುದ ನೀವ ಪಂಪಾಪುರಂ
ವಾರಣಾಸಿಗೆಯು ಮಿಗಿಲಾದ ಪಂಪಾಪುರಂ
ಮಾರಾರಿಗಂದು ಪುಗಿಲಾದ೩ ಪಂಪಾಪುರಂ
ಭವದಭಯಮಂ ನಿವಾರಿಸುವ ಪಂಪಾಪುರಂ
ತವೆವ ದುರಿತವಂ ನಿವಾರಿಸುವ ಪಂಪಾಪುರಂ೪

ಯುಗಪ್ರವರ್ತಕ ಬಸವಣ್ಣನವರು ೧೨ನೆಯ ಶತಮಾನದಲ್ಲಿ ಅವತರಿಸಿ, ಕಲ್ಯಾಣದಲ್ಲಿ ಮಹಾಮನೆಯನ್ನು ಕಟ್ಟುವುದಕ್ಕೆ ಮುನ್ನ ಮುನ್ನ ಕೂಡಲ ಸಂಗಮಕ್ಷೇತ್ರ, ಮಲಾಪಹಾರಿ ಬಳಿಯಲ್ಲಿರುವ ಐಹೊಳೆ ಸೋಮನಾಥಕ್ಷೇತ್ರ, ಸನ್ನುತ ತುಂಗಭದ್ರಾತೀರದಲ್ಲಿಯ ಪಂಪಾಕ್ಷೇತ್ರ ಇವುಗಳು ವಿದ್ಯಾಕೇಂದ್ರಗಳಾಗಿ ವಿರಾಜಿಸುತ್ತಿದ್ದವು. ಕಲ್ಯಾಣದ ಮಹಾಕ್ರಾಂತಿಯ ತರುವಾಯ ಶರಣರ ತತ್ವಗಳನ್ನು ಅವರು ಸಾಧಿಸಿದ ಆದರ್ಶವನ್ನು ಪ್ರಸಾರಮಾಡುವ ಸಾಹಿತ್ಯ ಧರ್ಮ ಪೀಠವಾಗಿ ಪಂಪಾಕ್ಷೇತ್ರವು ಹಂಪೆಯ ಹರೀಶ್ವರನಿಂದ ಪರಿಶೋಭಿಸಿತು. ಆ ಮಹಾವ್ಯಕ್ತಿಯ ಜನ್ಮಸ್ಥಳ, ಗುರುಪರಂಪರೆ, ತಾಯಿ ತಂದೆಗಳು, ಆತನ ಬಾಳುವೆ ಭಾರತದೇಶ ಪರ್ಯಟನ, ಇವೇ ಮೊದಲಾದ ಆತನ ಕೃತಿಗಳ ಬಗ್ಗೆ ನಮಗೆ ತಿಳಿದ ನಾಲ್ಕು ಮಾತುಗಳನ್ನು ಇಲ್ಲಿ ಉಲ್ಲೇಖಿಸುತ್ತೇವೆ.

---

೧ ಬಸವಣ್ಣನವರ ಷಟ್‌ಸ್ಥಳದ ವಚನ: ಭಕ್ತಿಸ್ಥಳ ೧೪೫—೧೯೪

೨ ಅಸಮಾಕ್ಷ= ಮೂರು ಕಣ್ಣುಳ್ಳವನು, ವಿರೂಪಾಕ್ಷೇಶ್ವರ

೩ ಪುಗಿಲಾದ= ಪ್ರವೇಶಿಸುವ ಮಹಾದ್ವಾರ. Entering Place.

೪ ಪಂಪಾಕ್ಷೇತ್ರದಸ್ತೋತ್ರ, ಹಂಪೆಯಹರಿಹರದೇವಕೃತ

# ಕವಿಯ ಜನ್ಮಸ್ಥಾನ

ಹರೀಶ್ವರನು ಜನಿಸಿದ್ದು ಇತಿಹಾಸ ಪ್ರಸಿದ್ಧ ಧರ್ಮಕ್ಷೇತ್ರವಾದ ಸಕಳ ಪುಣ್ಯಂಗಳೋಲಗಿಪ, ಮುಕ್ತಿಗಳಲಂಕರಿಪ ಪಂಪಾಪುರ; ಇಂದು ಕನ್ನಡಿಗರ ಕೆಚ್ಚೆದೆಯ ಸಾಹಸದ ಬೀಡಾದ, ರಾಜಕಾರಣ ಮುತ್ಸದ್ದಿಗಳನ್ನು ಬೆಚ್ಚೆರಗುಗೊಳಿಸಿರುವ ಬಳ್ಳಾರಿಜಿಲ್ಲೆಯಲ್ಲಿ ಮಕುಟಮಣಿಯಾಗಿ ಕನ್ನಡನಾಡಿನ ಪುಣ್ಯಕ್ಷೇತ್ರಗಳಿಗೆ ಚೂಡಾಮಣಿಯಂತಿರುವ ಹಂಪೆ. ಮಂಜುಳರವದ ಗಾನದಿಂದ ಪಂಪಾಂಬಿಕೆ ವಿರೂಪಾಕ್ಷರ ಶ್ರೀಪಾದಗಳನ್ನು ಸೋಂಕುತ್ತಿರುವ ಸನ್ನುತ ತುಂಗಭದ್ರೆ 'ಶುಭದಮುದ್ರೆ' ಹರಿಯುತ್ತಿರುವ ಪಂಪಾಪುರ. ಮಹಾಕವಿ ವಾಲ್ಮೀಕಿಯು ರಾಮಾಯಣದಲ್ಲಿ ವರ್ಣಿಸಿರುವ ಪಂಪಾಕ್ಷೇತ್ರ.

## ಗುರುಪರಂಪರೆ

ಶ್ರೀ ವಿರೂಪಾಕ್ಷದೊಳು[೧] ನಿತ್ಯನಭಿನವ ಮಹಾ
ದೇವಂ ಜಿತೇಂದ್ರಿಯಂ ನಿಷ್ಕಾಮಿ ದೇಹಗುಣ
ವಾವರಿಸದಮಲ ನಿರ್ಲೇಪನಾರೂಢಲೌಕಿಕವಂಟದಪ್ರತಿಮನು
ಭೂವಂದಿತಂ ನಿತ್ಯತೃಪ್ತಂ ಸಮಸ್ತಮುಖ
ಜೀವಾನುಕಂಪಿಯೆಂದೆನಿಸಿ ರಾಜಿಪಸುಕೃತಿ
ಭಾವಿ ಹಂಪೆಯ ಶಂಕರಪ್ರಭು ಮದೀಯಮತಿಗೀಗೆ ಪ್ರಸನ್ನತೆಯನು
ಸಕಲಾಗಮಾಚಾರ್ಯನನಸೂಯನಪ್ರತಿಮ
ಸಕಳಂಕನುತ್ತಮನನಂತವೇದಾರ್ಥಸಾ
ಧಕನವಿದ್ಯಾತೀತನಾನಂದಮಯನು ಶಾಪಾನುಗ್ರಹಾಧಿಕಾರಿ
ಪ್ರಕಟಿತಯಶೋಮಯಂ ಗುಪ್ತಲಿಂಗಪ್ರೇಮಿ
ಸುಕವಿ ಹಂಪೆಯಮಾದಿರಾಜಸುಜ್ಞಾನದೀಪಿ
ಕೆ ಕವಿವ ಮಾಯಾತಮಂಧವಟಿವಂತೆನ್ನಹೃದಯದೊಳ್ ತೊಳಗಿಬೆಳಗು[೨]

---

೧ ಪಂಪಾಕ್ಷೇತ್ರಕ್ಕೆ ಬಸವಣ್ಣನವರ ವಚನದಲ್ಲಿ 'ವಿರೂಪಾಕ್ಷ' ಎಂಬ ಹೆಸರು ಬಂದಿರುವಂತೆ ಕವಿರಾಘವಾಂಕನು ಅದನ್ನೇ ಪ್ರಯೋಗಿಸಿರುವುದು ಗಮನಾರ್ಹವಾದುದು.

೨. ಹರಿಶ್ಚಂದ್ರಕಾವ್ಯ ಸ್ಥಲ ೧ ಪದ್ಯಗಳು: ೯—೧೦

ಇಂತೊಪ್ಪುವ ಅಭಿನವಮಹಾದೇವರಾದ ಗುರು ಹಂಪೆಯ ಶಂಕರ ಪ್ರಭುಗಳು, ಅವರ ಬಳಿವಿಡಿದು ಬಂದ ಸಕಳಾಗಮಚಾರ್ಯ ಗುಪ್ತಲಿಂಗಪ್ರೇಮಿಗಳಾದ ಸುಕವಿ ಹಂಪೆಯಮಾದಿರಾಜರು ಅವರ ಆನಂದಮಯಮನವೆಂಬ ಕ್ಷೀರಸಾಗರಕ್ಕೆ ಚಂದ್ರಮನೋಪಾದಿಯಲ್ಲಿರುವ ಪ್ರತ್ಯಕ್ಷ ಪಂಚಾನನರಾದ ವಿದ್ಯಾಗುರು ಮಾಯಿದೇವರ ಘನತೆಯೆಂತೆಂದರೆ :

ಶ್ರೀಗುರು ಪರಮಗುರು ಘನಮಹಿ-
ಮಾಗುರು ಮಾಧುರ್ಯಗುರು ಮಹಾಗುರು ವರವಿ-
ದ್ಯಾಗುರು ಸುಖೈಕಗುರು ವಸು-
ಧಾಗುರು ಶೈವಗುರು ಶಾಂತಗುರು ಮಾಯ್ದೇವಂ[೧]

ಪಂಪಾಕ್ಷೇತ್ರದಲ್ಲಿಯೇ ಅತ್ಯಂತ ಪ್ರಖ್ಯಾತಿಯನ್ನು ಪಡೆದ ಸುರಚಿರ, ಸತ್ಯತರ, ಕೃಪಾಕರ, ಪುಣ್ಯವಿಸ್ತರ, ಶಾಂತಿಮಯ ಸುಧಾಕರ, ಮನೋಹರ ಮುಕ್ತಿಸುಖ ಭಕ್ತಿರಸಾರ್ದ್ರಚಿತ್ತಯುತ ಕೀರ್ತಿಪತಿಗಳಾದ ಚಂದ್ರಶೇಖರ ಗುರುಮೂರ್ತಿಗಳನ್ನು ಕುರಿತು ಹರೀಶ್ವರನು ಈ ರೀತಿ ಚಿತ್ರಿಸಿದ್ದಾನೆ.

ಹಂಪೆಯ ಶಂಕರದೇವಂ
ಹಂಪೆಯ ಗುರು ಮಾದಿರಾಜದೇವರ ಮತ್ತಾ
ಹಂಪೆಯ ಮಾದರಸರ ದಯೆ
ಯಿಂ ಪೇಳ್ದಂ ರಸಿಕಚಕ್ರಿ ಹರಿಹರದೇವಂ[೨]

ಮತ್ತು

ಶ್ರೀಗುರು ಶಂಕರದೇವರ ದಯೆಯಿಂ
ರಾಗದಿ ಮಾದರಸರ ಘನಕೃಪೆಯಿಂ
ಗುರುಹಂಪೆಯ ಮಾದರಸರ ದಯದೊಳ್
ವರಪಂಚಾಕ್ಷರಿಯಿಂ ಧಾರುಣಿಯೊಳ್
ಬಣ್ಣಿಸಿದಂ ಹಂಪೆಯ ಹರಿದೇವಂ[೩]

---

೧. ಗಿರಿಜಾಕಲ್ಯಾಣ ಮಹಾಪ್ರಬಂಧಂ ಆಶ್ವಾಸ ೧ ಕಂದಪದ್ಯ ೩೯

೨. ಮಹಾದೇವಿಅಕ್ಕನ ರಗಳೆ— ಸ್ಥಳ ೧ ಕಂದಪದ್ಯ

೩. ಹಂಪೆಯ ಹರೀಶ್ವರನ ಕೃತಿಗಳು— ಪಂಚಾಕ್ಷರಿರಗಳೆ ಪ್ರಕಾಶಕರು: ಶ್ರೀಮನ್ನಿರಂಜನ ಪ್ರಣವಸ್ವರೂಪ ರುದ್ರಸ್ವಾಮಿಗಳು, ಶ್ರೀಗುರು ಮೃತ್ಯುಂಜಯ ಗ್ರಂಥಮಾಲಾ ವಿರಕ್ತಮಠ ಕರ್ಜಗಿ ಜಿಲ್ಲಾ ಧಾರವಾಡ.

ಇಂತು ಹರೀಶ್ವರ ರಾಘವಾಂಕರಿಂದಲೇ ಸ್ತೋತ್ರಮಾಡಲ್ಪಟ್ಟ ಗುರುವಂಶ ದಲ್ಲಿ, ಹಂಪೆಯ ಶಂಕರಪ್ರಭುಗಳು ಅವರ ನಂತರ ಹಂಪೆಯ ಮಾದಿರಾಜರು, ಅವರ ತರುವಾಯ ಬರುವ ಹಂಪೆಯ ಮಾಯಿದೇವರು ಮಹಾದೇವರೆಂದೂ ಮಾದಿರಾಜರೆಂದೂ ಬಣ್ಣಿತವಾಗಿರಬಹುದು. ಹರೀಶ್ವರನ ಗುರುಪರಂಪರೆಯಲ್ಲಿ ಕೆಲವರು ಸಹಜ ವೈರಾಗ್ಯಶೀಲರಾಗಿ ನಿರಾಭಾರಿಗಳಾಗಿಯೂ[೧] ಸಹಜಪ್ರೇಮಿ ಗಳಾಗಿ ಸಂಸಾರಿಗಳಾಗಿಯೂ ಇರುವುದು ಕಂಡುಬರುತ್ತಿರುವುದು.

## ತಾಯಿತಂದೆಗಳು

ಶಿವಭಕ್ತರಲ್ಲದೊಡೆಕ್ಕೈಮುಗಿಯದ,
ತನ್ನ ಯುವತಿಗಲ್ಲದೆ ಮನವೆಳಸದ, ಕಾಯದಂಗವಹಿಡಿಯದ,
ನಿಂದೆಯನಾಡದ ಪರದೈವವಂ ಬಗೆಯದ,
ಶಿವಲಿಂಗಪೂಜೆಯಲ್ಲಿ ಬಳಲದ,
ಕಾಮವಿಕಾರಾದಿ ಷಡುವರ್ಗವಱಿಯದ ನೇಮವಿದೆಂದು ನಡೆವ
ಆದರ್ಶದಂಪತಿಗಳಾದ ಶರ್ವಾಣಿ ಮಹಾದೇವರೆ
ಹರೀಶ್ವರನ ತಾಯಿತಂದೆಗಳು[೨]

ಇಂತಹ ಮಹಾಗುರುಪರಂಪರೆ, ಆದರ್ಶತಾಯಿತಂದೆಗಳು, ಇದರ ಮೇಲೆ ಸದಾ ನಿತ್ಯೋತ್ಸವ ಭಕ್ತಪ್ರೇಮಿಗಳಾದ ಪಂಪಾಂಬಿಕೆ ವಿರೂಪಾಕ್ಷರ ಅನುಗ್ರಹ ವಿರಲು ವಿವೇಕಿಯೂ, ಜಾಣನೂ, ಸುಜನಪ್ರಾಣನೂ, ಕವಿತಾನಿಧಾನನೂ, ರಸಿಕಚಕ್ರಿಯೂ ಆದ ಹರೀಶ್ವರನು ಅವತಾರ ಮಾಡಲು ಕೌತುಕವೇನಿದೆ ?

---

೧. ಅತಿ ಪ್ರಾಚೀನ ಇತಿಹಾಸವುಳ್ಳ ಬೆಳಗಾವಿ ಜಿಲ್ಲಾ ಸವದತ್ತಿ ತಾಲೂಕು ಶ್ರೀ ಕ್ಷೇತ್ರ ಹೂಲಿ ಪಂಚವಣ್ಣಿಗೆ ಮಠಾಧಿಪತಿಗಳ ಪರಂಪರೆಯಲ್ಲಿ ಇಂದಿಗೂ ಕೆಲವರು ನಿರಾಭಾರಿಗಳಾಗಿಯೂ ಕೆಲವರು ಪಟ್ಟಚರಾಧಿಕಾರಿಗಳಾಗಿಯೂ ಸಂಸಾರಿಗಳಾಗಿಯೂ ಗುರುಪರಂಪರೆಯನ್ನು ಮುಂದುವರಿಸಿಕೊಂಡು ಬಂದಿರುವುದು ಸುಪ್ರಸಿದ್ಧವಾಗಿದೆ.

೨. ಮೈಸೂರು ವಿಶ್ವವಿದ್ಯಾಲಯದ ಓರಿಯಂಟಲ್ ರೀಸರ್ಚ್ ಇನ್ಸಟಿಟ್ಯೂಟಿನ ಮುಖ್ಯಾಧಿಕಾರಿಗಳೂ ನನ್ನ ಬಾಲ್ಯಗೆಳೆಯರೂ ಆದ ಮಲ್ಲಿಗೇನಹಳ್ಳಿ ಶ್ರೀ ಎಚ್. ದೇವಿರಪ್ಪ ಎಂ. ಎ. ಹಾಗೂ ಶ್ರೀ ದೇ. ಜವರೇಗೌಡ ಎಂ. ಎ. ಅವರು ಸಂಪಾದಿಸಿದ ಹಂಪೆಯ ಹರಿಹರದೇವಕೃತ ಗಿರಿಜಾಕಲ್ಯಾಣಮಹಾಪ್ರಬಂಧದ ಸಂಗ್ರಹದ ಪೀಠಿಕೆ ಯಲ್ಲಿ ಇದುವರೆಗೂ ಗೊತ್ತಾಗದೆ ಇದ್ದ ಹರೀಶ್ವರನ ತಾಯಿಯ ಹೆಸರನ್ನು ಸೂಚಿಸಿರು ವುದಕ್ಕೆ ನಮ್ಮ ಧನ್ಯವಾದಗಳು.

ವೀರಶೈವ ಧರ್ಮದಲ್ಲಿ ಜನಿಸಿದವರು ಶಾಸ್ತ್ರದಪ್ರಕಾರ ಕಾಲಕಾಲಕ್ಕೆ ದೀಕ್ಷಾ ಸಂಸ್ಕಾರ ಹೊಂದುತ್ತ ಬಂದಂತೆ ಗುರುಕರಕಂಜಸಂಜಾತರಾಗುವುದರಿಂದ ತಾಯಿತಂದೆಗಳ ಹೆಸರನ್ನು ಉಲ್ಲೇಖಿಸದೆ ತಮ್ಮ ಗುರುಗಳ ಹೆಸರನ್ನೇ ಉಲ್ಲೇಖಿಸುವ ವಾಡಿಕೆಯು ರೂಢಿಯೂ ಪ್ರಸಿದ್ಧವೂ ಆಗಿದೆ. ಬಸವಣ್ಣನವರನ್ನು ಅನುಭವ ಮಂಟಪದಲ್ಲಿ ಎಲ್ಲ ಶರಣರು "ಸಂಗನಬಸವಣ್ಣಾ" ಎಂದು ಸಂಬೋಧಿಸುತ್ತಾರೆ. ಎಂದರೆ ಗುರು ಸಂಗಮೇಶ್ವರನ ಪುತ್ರ ಬಸವಣ್ಣ ಎಂಬುದು ಅನುಭವಸಿದ್ಧ ಅರ್ಥವಾಗಿದೆ. ಅದರಂತೆ ಪಂಪಾ "ವಿರೂಪಾಕ್ಷ ಸಾಕ್ಷಾತ್ ಸುಪುತ್ರ" ನೆಂದು ಹರೀಶ್ವರನೂ; "ಚತುರಕವಿರಾಯ ಹಂಪೆಯ ಹರೀಶ್ವರನ ವರಸುತ" ಎಂದು ರಾಘವಾಂಕನೂ ತಮ್ಮ ಕೃತಿಗಳಲ್ಲಿ ಕರೆದುಕೊಂಡಿದ್ದಾರೆ. ಬಸವ, ಬಸವಣ್ಣ, ಬಸವರಸ, ಬಸವರಾಜ, ಬಸವದೇವ, ಬಸವೇಶ್ವರ ಎಂದು ಬಸವಣ್ಣನವರ ಹೆಸರು ಸಮಾಜದಲ್ಲಿಯೂ ಸಾಹಿತ್ಯದಲ್ಲಿಯೂ ರೂಢಿಯಲ್ಲಿ ಬಂದಂತೆ ಹರಿಗ, ಹರಿಯಣ್ಣ, ಹರಿಯರಸ, ಹರಿದೇವ, ಹರೀಶ್ವರ ಎಂದು ಮಹಾಕವಿ ಹಂಪೆಯ ಹರಿಹರದೇವನಿಗೆ ಸಹಾ ರೂಢಿಯಲ್ಲಿ ಬಂದಿರುವುದನ್ನು ಲಕ್ಷಿಸಬೇಕಾಗಿದೆ.

## ಗಣಿತಶಾಸ್ತ್ರಪಾರಂಗತ

ಹಂಪೆಯ ಹರೀಶ್ವರನು ಶ್ರೇಷ್ಠ ಗಣಿತಶಾಸ್ತ್ರಜ್ಞನೂ ಜೀವನದ ನಾನಾ ಮುಖದಲ್ಲಿ ಗಣಿತಶಾಸ್ತ್ರವನ್ನು ಪ್ರಯೋಗಿಸಿ ನೋಡುವಲ್ಲಿ ಪ್ರವೀಣನೂ ಪರಿಣತನೂ ಆಗಿದ್ದನೆಂಬುದಕ್ಕೆ ಆತನ ಕೃತಿಗಳಲ್ಲಿ ಸಾಕಷ್ಟು ಪ್ರಮಾಣಗಳು ದೊರೆಯುತ್ತಿವೆ. ಗಣಿತಶಾಸ್ತ್ರವನ್ನು ಸಾಹಿತ್ಯರೂಪದಲ್ಲಿ ತಿರುಗಿಸಿ ಹೇಳುವ ಪ್ರತಿಭೆಯುಳ್ಳವನೆಂಬುದಕ್ಕೆ "ಎಂಭತ್ತುನಾಲ್ಕುಲಕ್ಷ ಜೀವರಾಶಿಗಳು" ಎಂಬ ಬಹುಕಾಲದ ಶಾಸ್ತ್ರಪರಂಪರೆಯ ಶಬ್ದಗಳನ್ನು "ತಿರುಗುತ್ತೆಂಭತ್ತುನಾಲ್ಕುಂ ದಶಶತಶತಜನ್ಮಂಗಳೊಳ್"[೧] ಎನ್ನುತ್ತಾನೆ. ಶಾಸ್ತ್ರಕಾರರು ಒಬ್ಬ ಮನುಷ್ಯನ ಆಯುಷ್ಯಪ್ರಮಾಣವನ್ನು ಒಂದು ನೂರು ವರ್ಷವೆಂದು ಗಣಿಸಿದ್ದಾರೆ. ದಿನ ಒಂದಕ್ಕೆ ಒಂದು ಸಾವಿರ ಹೊನ್ನು ಖರ್ಚುಮಾಡಿದರೆ ನೂರುವರ್ಷಕ್ಕೆ ಮೂರು

---

೧. ರಕ್ಷಾಶತಕ ಪಂಪಾಶತಕ ಗ್ರಂಥದಲ್ಲಿ ೨ನೆಯ ಪದ್ಯ.

ಕೋಟಿ ಅರವತ್ತು ಲಕ್ಷ ಹೊನ್ನಾಗುತ್ತದೆ. ಆ ಮಾತನ್ನು ಈ ಕೆಳಗಿನ ಸಾಲುಗಳಲ್ಲಿ ಬಹು ಸ್ಫುಟವಾಗಿ ನಿರೂಪಿಸುತ್ತಾನೆ.

ನಿಚ್ಚಂ ಸಹಸ್ರಹೊನ್ನಿನಲೆಕ್ಕದಿಂ ಕೂಡಿ
ಅಚ್ಚರಿಮಿಗಿಲ್ ನೂರುವತ್ಸರಕ್ಕನುಮಾಡಿ
ಒರ್ವಂಗೆ ಪರಮಾಯು ನೂಱುವತ್ಸರಮೆಂದು
ಸರ್ವಧನದೊಳ್ ತೆಗೆಯಿಸಿದಂ ಮಲುಹಣಂಗೆಂದು
ಮೂರುಕೋಟಿಯ ಮೇಲೆ ಲಕ್ಕವರುವತ್ತಾಗೆ[1]

ಹಾಗೂ ಅಧಿಕ ಸಂಪತ್ತುಳ್ಳ ಧನಿಕನು ತನ್ನ ಆಪ್ತಪರಿವಾರ ವರ್ಗದವರಿಗೆ ಕೊಡಬೇಕೆಂಬ ಉದಾರ ಬುದ್ಧಿ ತೋರಿದಾಗ ಯಾರಾರಿಗೆ ಎಷ್ಟೆಷ್ಟು ಪ್ರಮಾಣದಲ್ಲಿ ಕೊಡಬಹುದೆಂದು ಈ ಕೆಳಗಣ ಸಾಲುಗಳಲ್ಲಿ ವ್ಯಕ್ತಪಡಿಸುತ್ತಾನೆ.

ಬಂಟರ್ಗೆ ದಾಸರ್ಗೆ ಸಹಸ್ರಸಂಖ್ಯೆಯ ಧನಂ
ನಂಟರ್ಗೆ ನಲ್ಲರ್ಗೆ ಲಕ್ಷಸಂಖ್ಯೆಯ ಧನಂ
ಪೊದ್ದಿದರ್ ಪೊರೆದರ್ಗೆ ಕೋಟಿಸಂಖ್ಯೆಯಧನಂ
ಸಾರ್ದಶಿಷ್ಯಾವಳಿಗನಂತ ಸಂಖ್ಯೆಯಧನಂ[2]

ಕಲ್ಯಾಣಪಟ್ಟಣದಲ್ಲಿ ಬಸವಣ್ಣನವರ ವ್ಯಕ್ತಿತ್ವದ ಘನತೆಯನ್ನು ಮೊಟ್ಟಮೊದಲಿಗೆ ಹರಿಹರನು ಬೀರುತ್ತಿರುವುದು ಈ ಗಣಿತಶಾಸ್ತ್ರದ ಬಲದಿಂದಲೇ ಅದಕ್ಕಾಗಿ ಒಂದು ಪವಾಡವನ್ನೇ ನಿರ್ಮಿಸುವನು.

ನೋಡುತಂ ಬೆರಗಾಗುತಲ್ಲಿ ಬಸವಣ್ಣನಿರೆ
ಕೂಡೆಲೆಕ್ಕದಸಂಭ್ರಮಂ ಸಿರಿಯನುಗುಳುತಿರೆ
ಬಂದನಲ್ಲಿಗೆ ಮೆರೆವ ಭಂಡಾರಿರಾಗದಿಂ
ಸಂದಣಿಸಿ ಲೆಕ್ಕಮಂ ನೋಡುವುದೋಗದಿಂ
ಕಮ್ಮೆ ಕುಲಪತಿಯೆನಿಪ ಸಿದ್ಧದಂಡಾಧಿಪಂ
ಸುಮ್ಮಾನಿ ಶಿವಭಕ್ತನಚಳಿತಗುಣಾಧಿಪಂ

---

೧. ಮಲುಹಣದೇವಚರಿತೆ ಮೊದಲನೆಯ ಸ್ಥಳ ೮೭–೯೧ ಸಾಲುಗಳು
೨. ಮಲುಹಣದೇವಚರಿತೆ ೧ನೆಯ ಸ್ಥಲ ೬೧—೬೪ ಸಾಲುಗಳು

ಕುಳ್ಳಿರ್ದು ತನ್ನ ಲೆಕ್ಕಂಗಳಂ ಕೇಳುತಿರೆ
ಒಳ್ಳಿತೆನೆ ಗಣಕರ್ಕಳೆಲ್ಲರುಂ ನೋಡುತಿರೆ
[೧]ಆಯದೊಳು[೧] [೨]ಬೀಯಮುಂ[೨] ಕಳೆದು[೩]ನಿಲವಂ[೩]ಕಂಡು
ಆಯತಿಯೊಳೆಲ್ಲರುಂ ಪೇಳಲ್ಮನಂಗೊಂಡು
ಐದುಕೋಟಿಯ ಮೇಲೆ ಲಕ್ಕವ್ವೈವತ್ತೆಂದು
ಐದೆ [೪]ಗಣಕರ್[೪] ತಪ್ಪಿಪೇಳೆ ಭರದಿಂದಂದು
ತಪ್ಪಿದುದನರಿದನಾ ಬಸವರಾಜಂನೋಡ
ಒಪ್ಪುವ ಗಣೇಶ್ವರರ ಗಣಾಧಿಪಂ ನೋಡ
ಕೊಂಡೊಯ್ದು ಬಿಜ್ಜಳನನಲ್ಲಿ ಕಾಣಿಸಿದೇವ
ಕಂಡೆನಿಲ್ಲಿಂತಪ್ಪ ಮತಿಯ ನಿಂತೆಲೆದೇವ
ಲಕ್ಕವ್ವೈವತ್ತನಿಂತೆನನಾಗುಮಾಡಿದಂ
ಲೆಕ್ಕದೊಳು ಪಡಿಯಿಲ್ಲ ಮತಿಯುಳ್ಳಕೋವಿದಂ
ಎನ್ನ ಭಂಡಾರಕ್ಕೆ ಬರೆಯಿಸುವೆ ನೀತನಂ
ಉನ್ನತ ಜ್ಞಾನಯುತ ಗಣಕವಿಖ್ಯಾತನಂ[೫]

ಇದನ್ನು ಓದುತ್ತಿರುವಾಗ ಓದಿದ್ದನ್ನು ಕೇಳುತ್ತಿರುವಾಗ ಗಣಿತಶಾಸ್ತ್ರದಲ್ಲಿ ಬಸವಣ್ಣನವರೂ ಹರೀಶ್ವರನೂ ಈ ಉಭಯರೂ ವಿಖ್ಯಾತಪುರುಷರಾಗಿದ್ದರೆಂಬುದು ಧೃಡತರವಾಗದಿರದು. ಪ್ರತಿಭಾಸಂಪನ್ನರಾದ ಬಸವಣ್ಣನವರನ್ನು ಕಲಚೂರ್ಯ ರಾಜ್ಯವು ದಂಡನಾಥ ಚೂಡಾಮಣಿ ಮಹಾಪ್ರಧಾನ ಪಟ್ಟಕ್ಕೆ ಆಮಂತ್ರಣವಿತ್ತಂತೆ ಹೊಯಿಸಳ ಬಲ್ಲಾಳರಾಜ್ಯದ ಉನ್ನತಾಧಿಕಾರಿಯಾಗಿದ್ದ ಕೆರೆಯಪದ್ಮರಸನು ಹರೀಶ್ವರನಿಗೆ ಹೊಯ್ಸಳರಾಜ್ಯದ "**ಕರಣಿಕ ಕುಲತಿಲಕ**" (Accountant General) ಸ್ಥಾನವನ್ನು ಸ್ವೀಕರಿಸಲು ದ್ವಾರಸಮುದ್ರ ಪಟ್ಟಣಕ್ಕೆ ಆಮಂತ್ರಣವಿತ್ತನು. "ಷೋಡಷಪ್ರತಿಯ ಕರಣಿಕರೊಳಗ್ರಣಿ" "ಕರಣಿಕ ಕುಲತಿಲಕ" ನೆನಿಸಿದರೂ ಪಂಪಾ ವಿರೂಪಾಕ್ಷನಿಗಾಗಿ ತನು ಮೀಸಲು, ಮನಮೀಸಲು, ನಯನ ಮೀಸಲಾಗಿದ್ದವು.

---

೧. (೧) ಆಯ Receipts (೨) ಬೀಯ Expenditure (೩) ನಿಲವು Balance (೪) ಗಣಕರ್ Accountants. (೫) ಬಸವರಾಜ ದೇವರ ರಗಳೆ

ಭಕ್ತಿಯೋಗಿಯೂ ಕರ್ತವ್ಯನಿಷ್ಠನೂ ಆದ ಹರೀಶ್ವರನ ಪ್ರಾಮಾಣಿಕತೆಯನ್ನು ಅಭ್ಯುದಯವನ್ನು ಸಹಿಸದೆ ಕೆಲವು ಜನರು ಗುಂಪುಕೂಡಿ ಅರಸನ ಬಳಿ ಕೊಂಡೆಯವನಾಡಿದರು. ಅರಸನು ಲೆಕ್ಕವನ್ನು ಕೇಳಿದನು ಪಂಪಾವಿರೂಪಾಕ್ಷನ ಹೆಸರಿನಿಂದ ವಹಿಗಳೆಲ್ಲವೂ ತುಂಬಿ ಹೋಗಿದ್ದರೂ ರಾಜ್ಯದ ಲೆಕ್ಕವನ್ನು ಸರಿ ಯಾಗಿ ಒಪ್ಪಿಸಿ ತನ್ನ ಸ್ಥಾನಕ್ಕೆ ತ್ಯಾಗಪತ್ರವನ್ನರ್ಪಿಸಿದನು. ಆ ಸಮಯದಲ್ಲಿ ಪಂಪಾವಿರೂಪಾಕ್ಷನಿಗೆ ಈ ರೀತಿ ಮೊರೆಹೊಗುವ ನಿವೇದನೆಯನ್ನು ಮಾಡುತ್ತಾನೆ.

> "ಪೋಗೆನೆ ಪೋಪ ಬಾರೆಲವೊ ಬಾರೆನೆ 'ಜೀಯ ಹಸಾದ'ವೆಂದು ಬೆ-
> ಳ್ಳಾಗುತೆ ಬರ್ಪ ಮಾಣೆಲವೊ ಸುಮ್ಮನಿರೆಂದೊಡೆ ಸುಮ್ಮನಿರ್ಪ
> ವುತ್ತಾಗಳೆ ಝುಂಕಿಸುತ ನಡುಗಿ ಬೀಳುವ ಸೇವೆಯ ಕಷ್ಟವೃತ್ತಿಯ
> ನೀಗಿದೆನಿಂದು ನಿಮ್ಮದೆಸೆಯಿಂ ಕರುಣಾಕರ ಹಂಪೆಯಾಳ್ದನೆ"೧

## ಭಾರತದೇಶ ಪರ್ಯಟನೆ

ಕೂಡಲಸಂಗಮದೇವನ ನಿಲುವೆಗೆ ಕುದಿಯುತ್ತಿದ್ದ ಬಸವಣ್ಣನವರಂತೆ ಹರೀಶ್ವರನು ಹಂಪೆಯ ವಿರೂಪಾಕ್ಷನ ನಿಲುವಿಂಗೆ ಆತನ ಶಕ್ತಿಯ ಪ್ರಸಾರ ಕ್ಕೆಂದು ಹಳೆಬೀಡಿನಿಂದ ಹೊರಟು ಭಾರತ ಪರ್ಯಟನವನ್ನು ಕೈಕೊಳ್ಳುತ್ತಾನೆ. ಶಿವಭಕ್ತಿಗೆ ತೌರುಮನೆಯಾದ " ತೊಂಡೈಮಂಡಲ " ಚೋಳದೇಶ, ಕನ್ನಡ ನಾಡಿನ ದಕ್ಷಿಣಕ್ಕಿರುವ ತಮಿಳದೇಶವನ್ನು ಸಂಚರಿಸಿ ಅರವತ್ತುಮೂವರ ಪುರಾತನರ ಕ್ಷೇತ್ರದರ್ಶನ ಮಾಡಿಕೊಂಡು ಆಂಧ್ರದೇಶವನ್ನು ಪ್ರವೇಶಿಸುತ್ತಾನೆ. ಗೋದಾವರಿತೀರದಲ್ಲಿರುವ ದ್ರಾಕ್ಷಾರಾಮಕ್ಷೇತ್ರದ ಭೀಮೇಶ್ವರಲಿಂಗ, ಪರವಳಿ ಗೆಯ ವೈಧ್ಯನಾಥೇಶ್ವರ, ಶ್ರೀಶೈಲದ ಮಲ್ಲಿಕಾರ್ಜುನ ಭ್ರಮರಾಂಬೆ ದರ್ಶನ ಪಡೆದು ವಾರಣಾಸಿ (ಕಾಶಿ) ಕ್ಷೇತ್ರಕ್ಕೆ ಹೋಗಿ ಮಂದಾಕಿನಿಯಲ್ಲಿ ಗಂಗಾಸ್ನಾನ, ಶ್ರೀ ವಿಶ್ವೇಶ್ವರದರ್ಶನ ಮಾಡಿಕೊಂಡು ತನ್ನ ಭಕ್ತಿಯನ್ನು ಬೆಳಗಿಸುತ್ತಾನೆ.೨

---

೧ ಪ್ರೊ. ಶಿ. ಶಿ. ಬಸವನಾಳ ಎಂ. ಎ. ಅವರು ಸಂಪಾದಿತ ಪಂಪಾಶತಕ ಪುಟ ೩೩ ಪದ್ಯ ೮೮

೨ ಹರೀಶ್ವರನು ಕಾಶೀಕ್ಷೇತ್ರಕ್ಕೆ ಹೋದ ಬಗ್ಗೆ ಒಂದು ಕಥೆಯಿದೆ. ಕಾಶಿಗೆ

ಹಿಮಾಲಯ ಪರ್ವತಶ್ರೇಣಿಗಳು,ಉತ್ತುಂಗ ಶಿಖರಗಳು, ಕವಿಯನ್ನು ಆಕರ್ಷಿಸು ತ್ತವೆ. ಕಾಶ್ಮೀರದ ಮನ್‌ಮನೋಹರ ಕಣಿವೆ ಕೊಳ್ಳಗಳು ತಮ್ಮ ಸೊಬಗಿನ ಆತ್ಮೀಯ ಆಕರ್ಷಣಶಕ್ತಿಯಿಂದ ಕನ್ನಡನಾಡಿನ ರಸಿಕಚಕ್ರಿಗೆ ಸ್ವಾಗತವಬಯು ಸುತ್ತವೆ. ಅಲ್ಲಿಂದ ಸೌರಾಷ್ಟ್ರದ ಸೋಮನಾಥನ ದರ್ಶನ ಮಾಡಿಕೊಂಡು ಅನೇಕ ಜ್ಯೋತಿರ್ಲಿಂಗಗಳ ದರ್ಶನ ಪಡೆದು ತೌರುಮನೆಗೆ ಬಂದಂತೆ ಪಂಪಾಕ್ಷೇತ್ರಕ್ಕೆ ಬಂದು "ಕಂಡೇಂ ವಿರೂಪಾಕ್ಷನ" ಎಂದು ಆನಂದಾಬ್ಧಿಯಲ್ಲಿ ಮುಳುಗುತ್ತಾನೆ.

## ಪಂಪಾಕ್ಷೇತ್ರಕ್ಕೆ ತಿರುಗಿಬಂದದ್ದು

ಭಾರತದ ನಾನಾ ಭಾಗಗಳಲ್ಲಿದ್ದ ಶಿವಭಕ್ತರು ತಮ್ಮ ಸಂಸ್ಕೃತಿಯನ್ನು ರಕ್ಷಿಸಿಕೊಳ್ಳಲು ಬಸವಣ್ಣನವರ ಕಾಲದಲ್ಲಿ ಕನ್ನಡನಾಡಿಗೆ ಬಂದವರು; ಅವರಲ್ಲಿ ಹಲವರು ಪಂಪಾಕ್ಷೇತ್ರಕ್ಕೆ ಬರುತ್ತಿದ್ದಾರೆ. ದರ್ಶನ ಸಂಭಾಷಣೆಯಿಂದ ಅವರಿಗೆ ಹರೀಶ್ವರನು ನೆರವಾಗುತ್ತಿದ್ದಾನೆ. 'ಶಿರಿಯಸಂಗ ಶರಣಸಂಗಕ್ಕೆ ಪಗೆಯಾಯ್ತು' ಎಂದು ಭಾವಿಸುತ್ತಿದ್ದಾನೆ. ಶರಾವತಿಗಿಂತಲೂ ಭಾರವಾಗಿ ಜನತೆಯ ಶಕ್ತಿಯಾದ ಭಕ್ತಿರಸವು ಹರೀಶ್ವರನ ಹೃದಯ ಯಂತ್ರದಲ್ಲಿ ಧುಮುಕುತ್ತಿದೆ. ರಗಳೆ ಛಂದಸ್ಸಿನ ರೂಪದ ತಂತಿಗಳಲ್ಲಿ ಪ್ರವಹಿಸುವ ವಿದ್ಯುಚ್ಛಕ್ತಿಯ ಬೆಳಕಿನಲ್ಲಿ ಶ್ರೀ ಪಂಪಾವಿರೂಪಾಕ್ಷರು ಭಕ್ತಸ್ತೋಮಕ್ಕೆ ದರ್ಶನವೀಯುತ್ತಿದ್ದಾರೆ. ಉತ್ತಮ ವಿಚಾರಗಳನ್ನು ತಿಳಿದುಕೊಳ್ಳಲು ವಿದ್ಯೆಯ ಅಭಾವದಿಂದ ತುಂಬಿದ ಭಕ್ತರ ಬಳಗವನ್ನು ಕವಿಯು ನಿರೀಕ್ಷಿಸುತ್ತಿದ್ದಾನೆ. ಚಂಪೂ ಕಾವ್ಯಗಳನ್ನು ಓದಲಾರದ, ಓದಿ ಹೇಳಿದರೂ ತಿಳಿಯಲಾರದ, ಜನಸಾಮಾನ್ಯರ ಸ್ಥಿತಿಯನ್ನು ಕಂಡು –ಮಗುವಿನ ಕಷ್ಟಕ್ಕೆ ತಾಯಿ ಮರುಗುವಂತೆ– ಮಾತೃಹೃದಯದ ಹರೀಶ್ವರನು ಮರುಗುತ್ತಾನೆ. ಅವನ ಹೃದಯದಿಂದ ಕರುಣರಸತುಂಬಿ ಕೋಡಿವರಿಯುತ್ತದೆ.

---

ಕವಿ ಹೋಗಬೇಕೆಂದು, ಬೇಡವೆಂದು ವಿರೂಪಾಕ್ಷ. ಈ ವಾದದಲ್ಲಿ ಹರೀಶ್ವರನು ಹಠ ಹಿಡಿಯುತ್ತಾನೆ. "ಹೋದರೆ ಹೋಗು, ಗಂಗಾಸ್ನಾನ ಮಾಡುವಾಗ ಅಲ್ಲಿ ನನ್ನ ನೆನಪು ಮಾಡಬೇಡ" ಎಂದು ಅಪ್ಪಣೆಯಾಯಿತು. ಆದರೆ ಬಹು ಸಂಸ್ಕಾರಿಯಾದ ಹರೀಶ್ವರನು ಗಂಗಾಸ್ನಾನ ಮಾಡುವಾಗ್ಗೆ "ವಿರೂಪಾಕ್ಷ" ಎಂದು ಸ್ಮರಿಸುತ್ತ ಮುಳುಗಲು ಪಂಪಾ ಕ್ಷೇತ್ರದ ತುಂಗಭದ್ರೆಯಲ್ಲಿ ಎದ್ದನು.

# ಹರೀಶ್ವರನ ವ್ಯಕ್ತಿತ್ವ

ಪಂಪಾಕ್ಷೇತ್ರವು ಶಿವಭಕ್ತಿಗೆ ತೌರುಮನೆಯಾಗಿದೆ. ಹರೀಶ್ವರನು ಕೋಳೂರು ಕೊಡಗೂಸಾಗಿದ್ದಾನೆ. ತಾಯಿತಂದೆಗಳುಳ್ಳ ಮಗಳಿಗೆ ನಿತ್ಯನೊಳು ನೆಲೆಗೊಂಡ ಮುತ್ತೈದೆಗೆ, ಹೊಂಗಡಗದ ಲಿಂಗವಂತೆಗೆ, ತೌರುಮನೆ ಆಹಾ ! ಎಷ್ಟೊಂದು ಸೊಗಸಿನ ಸೀಮೆ; ಭಾಗ್ಯದ ಹಿರಿಮೆ, ನೆರೆಮನೆಯ ವಾರಿಗೆಯವ ರೊಂದಿಗೆ ತಲೆಯೆತ್ತಿ ಮನದೆರೆದು ಮಾತನಾಡಲು ವಾತ್ಸಲ್ಯದ ವಾತಾವರಣ. ಬಯಸಿದಾಗ ಇಚ್ಛಿಸಿದ ರಸಬಸಿವ ಪ್ರಸಾದ ಪಕ್ವಾನ್ನಗಳನ್ನು ಉಣಬಹುದು. ಬೇಕಾದ ವಸ್ತ್ರಾಲಂಕಾರ ಮಾಡಿಕೊಳ್ಳಬಹುದು. ಅದರಂತೆ ಹಳೆಬೀಡಿನಿಂದ ಹೊರಟು ಭಾರತ ಪರ್ಯಟನ ಮುಗಿಯಿಸಿ ಹಂಪೆಗೆ ಬಂದೊಡನೆಯೇ ಹರೀಶ್ವರ ನಿಗೆ ತೌರುಮನೆಯ ವಾತಾವರಣ ಉಂಟಾಗಿದೆ. ಮಹಾಕವಿ ಕಾಳಿದಾಸನಿಗೆ ಪಾರ್ವತೀಪರಮೇಶ್ವರರಾದರೆ ಮಹಾಕವಿ ಹರೀಶ್ವರನಿಗೆ ಪಂಪಾಂಬಿಕೆ ವಿರೂಪಾ ಕ್ಷರು ತಾಯಿತಂದೆಗಳು; ವಿನಾಯಕ ಷಣ್ಮುಖ ವಿಜಯಕಲಿ ವೀರಭದ್ರರು ಒಡಹುಟ್ಟಿದವರು. ಶಿವಶರಣರ ಶರಣೆಯರೇ ಬಂಧುಬಳಗದವರಾಗಿದ್ದಾರೆ. ಬಸವಣ್ಣನವರಿಗೆ ಸೋದರಳಿಯ "ಷಟ್‌ಸ್ಥಳಧೀರ" ಚನ್ನಬಸವಣ್ಣನವರಿದ್ದಂತೆ ಹರೀಶ್ವರನ ಏಕಮಾತ್ರ ಸಹೋದರಿ ಶ್ರೀ ರುದ್ರಾಣಿಯ ಪುಣ್ಯಗರ್ಭಸಂಭೂತನೂ ಶಿವಶಾಸ್ತ್ರಕಲೆಗಾರ ಸಲೆಧೀರನೂ ಉಭಯಕವಿಶರಭ ಭೇರುಂಡನೂ ಆದ ಸೋದರಳಿಯ ರಾಘವಾಂಕನು ಆತನ ಶಿಷ್ಯತ್ವವನ್ನು ವಹಿಸಿ ವಿದ್ಯಾಭ್ಯಾಸ ವನ್ನು ಆರಂಭಿಸುತ್ತಾನೆ.

ಹರನ ಕರುಣೋದಯವಾದಾಗಲೇ ಹರೀಶ್ವರನಿಗೆ ಅರುಣೋದಯ. ಅದಲ್ಲದ ಹೊರತು ದ್ವಾದಶಾದಿತ್ಯರು ಏಕಕಾಲಕ್ಕೆ ಮೂಡಿ ಬಂದರೂ ಆತನಿಗೆ ಕತ್ತಲೇ ಸರಿ ! ಪ್ರಣವ ಪಂಚಾಕ್ಷರಿಯೇ ಗತಿ, ಸದ್ಭಕ್ತಿಯೇ ಮತಿ, ನಿರಾಶೆಯೇ ಸ್ವದೇಶವಾಗಿ ಶಿವಾನುಭಾವದ ಉದಾತ್ತ ಬಾಳುವೆ ಮಾಡುತ್ತಿದ್ದಾನೆ. ಇಂದಿನ ನಮ್ಮ ಸ್ವತಂತ್ರ ಸಾರ್ವಭೌಮ ಪ್ರಜಾರಾಜ್ಯದ ಘಟನೆಯ ಪ್ರಕಾರ ಭಾರತೀಯ ರೆಲ್ಲರೂ ಒಂದೇ ಎಂಬ ಮಹಾತತ್ವ ಪ್ರಣಾಲಿಗೆ ಪೋಷಕವಾಗುವಂತೆ "ಭರದಿಂ ಲಿಂಗಾರ್ಚನೆ ಮಾಡುವ ಶಿವಕುಲಂ ಒಂದೇ" ಎಂಬ ಬಸವಣ್ಣನವರ ಕ್ರಾಂತಿ ಸಂದೇಶವನ್ನು ಸುಳಿವ ಶಾಸನದಂತೆ ಸಾರುತ್ತಿದ್ದಾನೆ. " ಆವ ಜಾತಿಯೊಳು

ಹುಟ್ಟಿಸಿದೊಡೆ ಎಲೆದೇವ ನೀವಲ್ಲದರಿಯದಂತಿರಿಸೆನ್ನ ನೆಲೆದೆವ"[೧] ಎಂದು ಅಗ್ರಜ ರಿಂದ ಅಂತ್ಯಜರವರೆಗೆ ಎಲ್ಲಿ ಹುಟ್ಟಿ ಬಂದರು ಸಹಾ "ಶಿವಭಕ್ತಿ''ಯೊಂದನ್ನೇ ಅರಿಯುವಂತೆ ಕರುಣಿಸಬೇಕೆಂದು ಪ್ರಾರ್ಥಿಸುತ್ತ ತಾನು ಹೇಳಿದಂತೆ ಕೇಳಿದರೆ "ರಸಿಕ''ನನ್ನು ಮಾಡುವೆನೆಂದು ಶಿವನಿಗೆ ಅಭಯಪ್ರದಾನ ಮಾಡುತ್ತಾನೆ.[೨] ಹರಂಗೆ ಶಶಿಭೂಷಣಂಗೆ ಶಂಭುವಿಗೆ, ಶಂಕರಂಗೆ ತನ್ನ ನಾಲಿಗೆಯನ್ನು (ಸ್ತುತಿ) ಪ್ರತಿಜ್ಞಾಪೂರ್ವಕ ಮೀಸಲಿರಿಸಿದ ಮಹಾಪುರುಷ; ಏನುವಂ ಪಾರದೆ ಶಿವನಂ, ಅರ್ಚಿಸುವ, ಶಿವಶರಣರಂ ಪ್ರೀತಿಸುವ, ಅವರ ಮಹಿಮೆಯನ್ನೂ ಸಾರುವ ಅವರ ತತ್ವಂಗಳಂ ಜಗತ್ತಿನೊಳ್ ಬಿತ್ತುವ, ಪರಸಮಯದ ಗರ್ವಂ ನಿಲಿಸುವ ಎದೆಗಾರ ಪುರುಷನಾಗಿದ್ದಾನೆ. ಈ ರೀತಿಯಲ್ಲಿ ಹರಿಹರನ ಪ್ರತಿಜ್ಞೆ ಮೆಚ್ಚು ವಂತಹದ್ದಾಗಿದೆ. ಆತನ ಈ ಪ್ರತಿಜ್ಞೆ ಬಡ ಪ್ರತಿಜ್ಞೆಯಲ್ಲ! ವೀರಪ್ರತಿಜ್ಞೆಯೂ, ಧೀರಪ್ರತಿಜ್ಞೆಯೂ ಆಗಿದೆ.

ಪರಮಾತ್ಮನನ್ನು ಸಕಲ ಇಂದ್ರಿಯಗಳಲ್ಲಿಯೂ ಕಾಣುವ ವ್ಯಕ್ತಿತ್ವ ಆತನದು. ಶಿವನಂ ನೋಡದ ಕಣ್ಗಳೇಕೆ? ಸಲೆ ಕೇಳದ ಕರ್ಣಮದೇಕೆ? ಭಕ್ತಿಯಿಂ ಆತನ ಪಾಡದ ಬಾಯದೇಕೆ? ಆತನ ಪೆಸರಂ ಕೊಳ್ಳದ ಜಿಹ್ವೆಯ ದೇಕೆ? ಪೂಜೆಯಂ ಮಾಡದ ಕೈಗಳದೇಕೆ? ನೆರೆ ಸೋಂಕದ ದೇಹಮದೇಕೆ? ಕೂಡಿ ಅಳ್ಕರಿಂ ಆಡದ ಚಿತ್ತವೇಕೆ? ಎಂದು ಸರ್ವಾಂಗವನ್ನು ಪರಮಾತ್ಮನಿಗೆ ಅರ್ಪಿಸಿದ ಸರ್ವಾಂಗಲಿಂಗಮಯನಾದ ಪರಮಭಕ್ತ. ಆವಕಾಲವಾದೊಡೆಯೂ ಸೀಳ್ದೊಡಂ ಪೋಳ್ದೊಡಂ ಪೊಯ್ದೊಡಂ,ಆತನ ಪಾದಾಬ್ಜಮಂ ಬಿಡದ ಧೀರಭಕ್ತ; ಪರಮಾತ್ಮನಲ್ಲಿಯ ಆತನ ಈ ತೆರನಾದ ಅಚಲಭಕ್ತಿ ಮನಕರಗಿಸುತ್ತದೆ. ಭೀಕರ ಭೀಮಪುರುಷನ ಮಾರ್ಗವಾಗಿದೆ. ಆತನ ಜೀವನ,ಮಹಾಭಕ್ತನ ಜೀವನ. ಅವನ ಮಾತಿನಲ್ಲಿಯೇ ಹೇಳುವದಾದರೆ " ಪೆರತೊಂದಂ ನುಡಿಯಂ, ಪ್ರಪಂಚ ರಹಿತಂ, ಕಾರ್ಪಣ್ಯಮಂ ಮಾಡ, ಎಳ್ದುಎರಗಂ, ಕಾಮದ ಬಟ್ಟೆಯತ್ತಲೆಳಸಂ ತರ್ಕಕ್ಕೆ ಮಾತ್ಸರ್ಯವೆಂದರಿಯಂ, ಲೋಕದ ಮಾನವರ್ಗೆ ಮಣಿಯಂ ಕುಲಾದಿಗಳಂ ಬಗೆಗೊಳ್ಳಂ ಕಾಯಕಪ್ರೇಮಿ, ಸದ್ಭಕ್ತ, ಸತ್‌ಸಂಗಮಂ

---

೧. ಲಿಂಗಾರ್ಚನೆಯ ರಗಳೆ.

೨. ಅಮ್ಮವ್ವೆ (ಬಿಜ್ಜಮಹಾದೇವಿ) ಕಥೆ. ಹಂಪೆಯ ಹರೀಶ್ವರಕೃತ.

ತೊರೆಯಂ, ಸತ್ಯವಲ್ಲದುದನಾಡಂ,ಅಚಲಂ ನಿರಪೇಕ್ಷಿ ,ಕರುಣಾಕರ, ಸುಖಮಯ ಶಾಂತ, ಮಹೋತ್ಸಾಹಿ,ಭಕ್ತಿರತಂ, ಮಂಗಲಮೂರ್ತಿ,ಲಿಂಗಶುಭಗಂ ಸಂತೋಷಿ ಸತ್ಯಾತ್ಮ, ಉರ್ವೀಜನವಂದ್ಯ, ಅನೇಕಾಶ್ಚಯುಕ್ತಂ ಮಾಹೇಶ್ವರಂ; ಆತನ ನಡೆ ಉರಿನಡೆದಂತೆ, ಭಾನುನಡೆದಂತೆ, ಸಿಡಿಲ್‌ನಡೆದಂತೆ, ಹರನಲ್ಲದೆ ಅನ್ಯ ದೈವವ ಭವಿಗಳ ಕೀರ್ತಿಸುವ ಕವಿಯಲ್ಲ.''

ಹರಿಹರ ಕವಿಯು ಮಹಾಪ್ರತಿಭಾವಂತ. ಶಬ್ದಗಳಿಗಾಗಿ ಕುದಿಕುದಿದು ಕೋಟಲೆಗೊಂಡ, ಗೂಡಾರಂ ಮುಚ್ಚಿಪೋದ ಕವಿಯಂತಿರೆ ಇರುವ ಕವಿಯಲ್ಲ; ಶುಷ್ಕವೈಯಾಕರಣನಂತೆ, ಶುಷ್ಕತಾರ್ಕಿಕನಂತೆ ಕಾವ್ಯವನ್ನು ಸೃಷ್ಟಿಸಿದ ಕವಿಯಲ್ಲ. ಶಿವಶಕ್ತಿರೂಪವಾದ ಕವಿತ್ವವನ್ನು ಪಡೆದು ಪರಮಾತ್ಮನ ನಾಮ ಸ್ಮರಣೆಯನ್ನು ಪ್ರಾರಂಭಮಾಡಿ ಕಾವ್ಯ ಬರೆಯಲು ತೊಡಗಿದರೆ ಗೌರೀಶಂಕರ ಶಿಖರದ ಮೇಲಿಂದ ಕೆಳಗೆ ಬೀಳುವ ಗಂಗಾಪ್ರವಾಹದಂತೆ ಆತನ ನಾಲಗೆಯ ತುದಿಯಿಂದ ಶಬ್ದಗಳು ತಮ್ಮಷ್ಟಕ್ಕೆ ತಾವೇ ಧಡಧಡನೆ ಕೆಳಗೆ ಇಳಿಯುತ್ತವೆ. "ನವನಿಧಿ ಬಾರ, ಪುಣ್ಯನಿಧಿ ಬಾರ, ಮಹಾನಿಧಿ ಬಾರ, ಭಕ್ತರುತ್ಸವನಿಧಿ ಬಾರ, ಭಾಗ್ಯನಿಧಿ ಬಾರ,ಸುಧಾರಸಕಾಂತಿಯುದ್ಭವನಿಧಿ ಬಾರ, ಸತ್ವನಿಧಿ ಬಾರ, ಕೃಪಾ ನಿಧಿ ಬಾರ, ಸತ್ಯಸಂಭವನಿಧಿ ಬಾರ ತತ್ವನಿಧಿ ಬಾರ; ಗಂಗಾಧರ, ಶಶಾಂಕ, ಶಿಖಿ ಮಾರ್ತಂಡ, ತ್ರಿಣೇತ್ರಾಂಕ, ಭೋಗೀಂದ್ರಾರ್ಚಿತ ರತೀಶವಿಪಿನಪ್ರೋತ್ ಭೂತ ದಾವಾಗ್ನಿ, ಯೋಗಿವ್ರಾತಪರೀತ, ಶರಣಹೃದ್‌ರಾಜೀವ, ಸಪ್ತಾಶ್ವನಾಗೇಂದ್ರಾ ಜಿನದಿವ್ಯವಸ್ತ್ರಧರ, ಶಶಾಂಕಧರ, ಕಾಪಾಲಿ, ಕಾಲಸಂಹರ, ಶೂಲಿ, ಈಶ, ಗಿರಿಶ, ಗಿರೀಶ,ಬಾಳಾಕ್ಷ, ನೀಲಕಂಧರ, ಭರ್ಗ, ಉಗ್ರ ಪರಮ ಸರ್ವಜ್ಞ,ಶಂಭು, ಗಿರಿಜಾ ವಲ್ಲಭ, ಮನೋಜಹರ ಸತ್ಯಾತ್ಮ ಕಾಮಾರಿ ವಿರೂಪಾಕ್ಷ"[೧] ಎಂದು ಹೊಸ ದೊಂದು ಅಮರಕೋಶವನ್ನೇ ತಯಾರುಮಾಡಬಲ್ಲ ಮಹಾಪ್ರತಿಭಾವಂತ. ಇಂತಹ ಶಕ್ತಿಯನ್ನು ಕೇವಲ ದೈವದತ್ತವೆಂದು ಹರಿಹರನಲ್ಲಿ ಕಾಣಬಹುದಾಗಿದೆ. ಸರಸ್ವತಿಯ ಭಂಡಾರದ ಮುದ್ರೆಯೊಡೆದು ತನ್ನ ಶಬ್ದರತ್ನಗಳನ್ನು ಆ ಭಾಂಡಾರ ದಲ್ಲಿ ಸೇರಿಸಿ, ಸಂಪತ್ತನ್ನು ಹೆಚ್ಚಿಸಿ, ಭಂಡಾರಕ್ಕೆ ಅಧಿಪತಿಯಾಗುವಂತಹ ಕವಿ ಹರಿಹರದೇವ ಜೀವನ ಪ್ರೀತಿಯ ಜೀವನ. ಶರಣರ ಪ್ರೀತಿಗೆ ಎಣೆಯಿಲ್ಲ. ಹರಭಕ್ತರಂ ಕಂಡೊಡೆ ಉಬ್ಬುತ್ತ ಅವರ ಚರಣಮಂ ಕಣ್ಗಳೊಳ್, ಕಂಠದೊಳ್

---

೧. ರಕ್ಷಾಶತಕ ಮತ್ತು ಪಂಪಾಶತಕ

ಪೇರುರದೊಳ್ ಭಾಳಾಗ್ರದೊಳ್,ಘೋರ್ಯುಗದೊಳ್ ಉಭಯಗಂಡಂಗಳೊಳ್ ತಾಳ್ದು, ಎತ್ತುತ್ತೆ, ಅಪ್ಪುತ್ತೆ ಒರೆಯುತ್ತೆ ಮುದ್ದಿಸುತ್ತೆ ನಮಿಸುತ್ತೆ ಹಿರಿಹಿರಿ ಹಿಗ್ಗುತ್ತ ಅತುಳ ಸುಖದೊಳೋಲಾಡುತ್ತಿರುವವನ ಜೀವನ ಆತನದಾಗಿದೆ. ಶಿವಶರಣರಂ ಕಂಡೊಡೆ ಇದಿರ್ಬಂದು, ಆರ್ತದಿಂದ, ಪ್ರೀತಿಯಿಂದ, ಸ್ನೇಹದಿಂದ ಎನ್ನಾನಂದದ ತವನಿಧಿ ಎನ್ನ ಆಯು, ಎನ್ನ ಆಶ್ಚರ್ಯ, ಎಲ್ಲವೂ ನೀವೆ, ಆಂ ಕಾಪಿನ (ಸಂರಕ್ಷಣೆಯ) ಆಳೆಂದು ಬೇಡಿಕೊಳ್ಳುವ ಭೃತ್ಯಾಚಾರ ಜೀವನ ಹರಿಹರನ ಜೀವನವಾಗಿದೆ; ದಿವ್ಯಮಹಾಮಹಿಮ, ದಾಸೋಹಂಭಾವಿ ಶಿವಭಕ್ತಿ ಸಂಪನ್ನ, ಸುಜ್ಞಾನಿ, ನಿರಹಂಕಾರಿ, ಶಿವಯೋಗಿ.

ಶಿವನ ಮಹಿಮೆಯನ್ನು ಎಷ್ಟು ಕೊಂಡಾಡಿದರೂ ಸಾಲದು, ತಾನು ಭಕ್ತ, ದುರ್ಗುಣಗಳ ತವರು; ಪರಮಾತ್ಮನು ಪಾರಮ್ಯತೆಯ ಸದ್ಗುಣಗಳ ತವರು, ಭಕ್ತಿ ಜ್ಞಾನವೈರಾಗ್ಯಮಂ ಕೊಟ್ಟು ಸಲಹೆಂಬುದೇ ಆ ಆರ್ತಭಕ್ತನ ವಿನಮ್ರಬೇಡಿಕೆ. ಆತನು ಭಕ್ತಿಯಿಂದ ಪೂಜೆಮಾಡುವ ಸನ್ನಿವೇಶವು ಎಂಥ ಕಲ್ಲೆದೆ ಯವರನ್ನು ನಾಸ್ತಿಕರನ್ನೂ, ಮನವಿಲ್ಲದವರನ್ನು ಶಿರಬಾಗುವಂತೆ ಮಾಡುತ್ತದೆ. ಆತನು ಪೂಜೆಗೆ ಪ್ರಾರಂಭಿಸುವದೊಂದೇ ತಡ, ರೋಮಾಂಚಗಳೆದ್ದು, ಬೆಮರ್ದು ಗದ್ಗದಂ ಪೊಣ್ಮಿ, ಆನಂದದ ಅಶ್ರು ಹರಿದು, ಎಲ್ಲರನ್ನು ಭಕ್ತಿರಸದಲ್ಲಿ ತೇಲಿಸಿ ತಾನೂ ತೇಲಾಡಿ ಓಲಾಡುವಂತೆ, ಎಲ್ಲರನ್ನೂ ಭಕ್ತಿಸಾಗರದಲ್ಲಿ ತೇಲಾಡಿಸು ತ್ತಾನೆ. ಪೂಜೆಯ ಮಾಡಿ, ಪೂಜೆಯಂ ಮೆಚ್ಚದೆ ಮತ್ತೊಮ್ಮೆ ಪೂಜೆಯಂ ಮಾಡಿ, ಮನವಾರೆನೋಡಿ, ಮೆಚ್ಚಿ, ಮರಳಿ ಮರಳಿ ಈಕ್ಷಿಸಿ, ಮುದ್ದಿಸುತ್ತ ಹರ್ಷದಿಂದ ಉತ್ಸಾಹದಿಂದ, ಧಿಣಿಧಿಣಿರವದಿಂ ಪಾಡುತ ಇರುವ ಉತ್ಸಾಹಿ ಜೀವನ ಮಹಾ ಭಕ್ತ, ಮಹಾಕವಿ ಹರಿಹರನದು. ಹರನಾಮವು ಆತನ ಕಿವಿಗೆ ಬೀಳ್ದೊಡೆ ಯುವಕನಿಗೆ ಸ್ತ್ರೀಮಾತ್ರಂ ನೇತ್ರದತ್ತಲ್ ಸುಳಿದೊಡೆ ಮನವು ಇರ್ಭಾಗ ವಾಗುವಂತೆ ಹರಿಹರನ ಆನಂದವುಕ್ಕಿ ರೋಮಾಂಕುರವೆಳ್ದು ಅಶ್ರುಪ್ರವಾಹ ಗಳಗಳನೆ ಇಳಿತಂದು, ಅಂಗವಲ್ಲಾಡಿ, ಸ್ವರದಿಂ ಗದ್ಗದ ಪುಟ್ಟುವ ಸ್ಥಿತಿಯಲ್ಲಿರುತ್ತಾನೆ. ಆತನಿಗೆ ಮಾತ್ರ ಸತಿ ಕಾರುಣ್ಯ, ಮತಿ ಕುಮಾರಂ, ಸಖನುರುತರಸತ್ಯ, ಪ್ರಧಾನಂ ವಿವೇಕ; ಅದರಿಂದ ಸತತವಾಗಿ ಶಾಂತಿಸ್ಥಲ ದೊಳೆಸೆವ ಸದ್ಭಕ್ತಿಸಪ್ತಾಂಗರಾಜ್ಯ ಸ್ಥಿತನಪ್ಪಂತೆ, ಇರಿಸೆಂಬುದೇ ಆತನ

ಮನದೊಲವು. ಪರಮಾತ್ಮನಿಗೆ ತಾನು ಕರೆಯುವದಕ್ಕಿಂತ ಮುನ್ನವೇ ಪರಮಾತ್ಮನು ಬಂದು "ಓಓಮಗನೆ ಬಂದೆಂ ದಿಟವಾಗಿಯೂ ಬಂದೆ" ಎಂದು ಆದರದಿಂದ ಅವಯುವಗಳನ್ನು ಮುಟ್ಟಿ "ನೊಂದೆಯಾ, ಬಳಲಿದೆಯಾ ಕಂದಾ" ಎಂದು ಕೇಳಬೇಕೆಂಬುದು ಆತನ ಆಶೆ. ಪರಮಾತ್ಮನಿಗೂ ಆತನಿಗೂ ತಂದೆಮಗನ ಸಂಬಂಧವು ಇಲ್ಲಿ ವ್ಯಕ್ತವಾಗಿದೆ. ಪರಮಾತ್ಮನ ಕೃಪೆಗಾಗಿ ಹರೀಶ್ವರನ ಪ್ರಾರ್ಥನೆ ಹೃದಯದ್ರಾವಕವಾಗಿದೆ.

ಹರಿಹರನು "ಪೋಗೆನೆ ಪೋಪ, ಬಾರೆಲವೋ ಬಾರೆನೆ ಜೀಯಹಸಾದ" ಮೆಂದು ಬಪ್ಪ, ಮತ್ತಾಗಳೆ ಝುಂಕಿಸಲ್ ನಡುಗಿ ಉಡುಗಿ ಬೀಳುವ ಸೇವೆಯ ಕಷ್ಟವೃತ್ತಿಯಲ್ಲಿ ಮಾನವನು ಇರುತ್ತಾನೆ ಎನ್ನುವಲ್ಲಿ ಅಸದೃಶವಾದ ಲೌಕಿಕ ಮತ್ತು ಮಾನವಸ್ವಭಾವದ ನಿಯಮವನ್ನೇ ಹೇಳಿದ್ದಾನೆ. ಹರಿಹರನು ಮಾನವನ ಅಂತರಂಗವನ್ನೂ ಒಳಹೊಕ್ಕು ನೋಡಿ ಆತನ ದೋಷಗಳಾವವು, ಗುಣಗಳಾವವು ಎಂದು ಹೇಳುವಲ್ಲಿ ಆತನ ಮಾನವೀಯತೆಯು ಅನ್ಯಾದೃಶವಾಗಿದೆ.

ಉದಾಹರಣೆಗಾಗಿ : ಶಿವನು ತನಗೆ ಮಗನಾಗಬೇಕೆಂದು ಹಂಬಲಿಸಿದ ಬಿಜ್ಜಮಹಾದೇವಿಯು ತನ್ನ ಕುಲದೈವವಾದ ನಾಗೇಶನ ಅಪ್ಪಣೆಯಂತೆ ಅರಣ್ಯದಲ್ಲಿ ಅಲೆದಾಡುತ್ತ ಬರುತ್ತಿದ್ದಾಳೆ. ಆ ಸಮಯದಲ್ಲಿ ಜಿಂಕೆಗಳು ತಮ್ಮಮಕ್ಕಳೊಂದಿಗೆ ಭರದಿ ಹಾರಾಡುತ್ತ ಹೊರಟಿವೆ. ಕಪಿಗಳು ಎದೆಗೆ ಅಪ್ಪಿಕೊಂಡಿರುವ ಮಕ್ಕಳೊಂದಿಗೆ ಕೊಂಬೆಯಿಂದ ಕೊಂಬೆಗೆ ಲಂಘಿಸುತ್ತಿರುವುದನ್ನು ನೋಡುತ್ತಾಳೆ. ಆ ಸನ್ನಿವೇಶವು ಬಿಜ್ಜಮಹಾದೇವಿಗೆ ಸಹಜವಾದ ಮಕ್ಕಳ ಬಯಕೆಯನ್ನು ಹೊರಹೊಮ್ಮಿಸುತ್ತದೆ. ಆಗ ಅಯ್ಯೋ, ನಾಗೇಶಾ ! "ಎನ್ನಪುಟ್ಟಿಸದಾದೆ ಏಕಯ್ಯ ಮೃಗಗಳೊಳ್" ಆ ಹರಿಣ, ಆ ವಾನರಜನ್ಮಕ್ಕಿಂತ ಮಕ್ಕಳನ್ನು ಪಡೆಯದ ನನ್ನ ಜನ್ಮ ಕಡೆಯಾಯಿತೆ ? ಎಂದು ಹೃದಯಸ್ಪರ್ಶಿಯಾದ ಭಾವವನ್ನು ಅರಳಿಸುವನು.[೧] ತಿರುನಲ್ಲೂರಿನಲ್ಲಿ ಸಾವಿತ್ರಿ ಅಚ್ಯುತ ಭಟ್ಟರೆಂಬುವರು ತಂಡೇಶ ಪಿಳ್ಳೆ ಎಂಬ ಮಗನನ್ನು ಪಡೆಯುವರು. ಆ ಶಿಶುವು ಬೆಳೆದಂತೆ ಅವರಿಗೆ ಬಡತನವು ಬೆಳೆಯುತ್ತದೆ. ವಾಡಿಕೆಯಂತೆ ಪುರಜನರು ಬಂದು "ಎಲೈ ವಿಪ್ರರೇ ಶುಭ ನಕ್ಷತ್ರದಲ್ಲಿ ಜನಿಸದ ನಿಮ್ಮ ಮಗನಿಂದ

---

೧ ಅಮ್ಮವ್ವೆ ಕಥೆ, ಪುರಾತನ ಮಾತೆಯರ ಕಥೆಗಳು ಪುಟ ೮೮-೮೯

ಈ ಬಡತನ ಪ್ರಾಪ್ತವಾಗಿದೆ. ದಾರಿಯಲ್ಲಿ ಹೋಗುವವರಿಗೆ ಈ ಕೂಸನ್ನು ದಾನಮಾಡಿದರೆ ನಿಮ್ಮ ದರಿದ್ರ ನಾಶವಾಗುವುದೆಂದು" ಕಣಿ ಹೇಳುತ್ತಾರೆ. ಅದನ್ನು ಕೇಳಿ ಆ ತಾಯಿತಂದೆಗಳು— **"ಮಗನುಳ್ಳ ಬಡತನಂ ಸಂಪದಕೆ ಸರಿಯೇಕೆ ಮಗನಂ ಪೆರರ್ಗಿತ್ತು ಬಾಳ್ವ ಸಂಪದವೇಕೆ?"**[೧] ಎಂದು ಬಹು ಮಾರ್ಮಿಕವಾಗಿ ಉತ್ತರ ಕೊಡುತ್ತಾರೆ. ಇಂತಹ ಸನ್ನಿವೇಶಗಳನ್ನು ನೆನೆದಾಗಲೆಲ್ಲ ಬಡವರ ಹಾಗೂ ಅವರ ಮಕ್ಕಳ ಬಗೆಗಿರುವ ಹರಿಹರನ ಕನಿಕರ ದೃಷ್ಟಿಯು ಸ್ಫುಟವಾಗಿ ವ್ಯಕ್ತವಾಗುವುದಲ್ಲವೇ ? ಮಾನವೀಯತೆಯೇ ಮಹಾ ಕವಿಯ ಲಕ್ಷಣ. ಆತನಲ್ಲಿ ಲೌಕಿಕ ದೃಷ್ಟಿ, ಮಹೋನ್ನತವ್ಯಕ್ತಿತ್ವ ತುಂಬಿದೆ. ತಾನು ಕಂಡುದನ್ನು, ಕೇಳಿದುದನ್ನು, ಅನುಭವಿಸಿದುದನ್ನು, ತನಗೆ ಸತ್ಯವೆಂದು ಕಂಡುದನ್ನು, ಜೀವನದ ಒರೆಗಲ್ಲಿಗೆ ಹಚ್ಚಿ ಒರೆದುನೋಡಿ ಕಾವ್ಯದಲ್ಲಿ ಉಪ ಯೋಗಿಸುತ್ತಾನೆ. ಪರರು ಹೇಳಿದ್ದನ್ನು ಸತ್ಯವೆಂದು ನಂಬಿ, ತನಗೆ ಸತ್ಯವೆಂದು ಕಂಡುಬಾರದಿದ್ದರೆ ಅದನ್ನೆಂದಿಗೂ ಪ್ರತಿಪಾದಿಸಲಾರ.

ಇದು ಪೊಸರೀತಿ ನೋಡಿದು ನವೀನಮಲಂಕೃತಿ ನವ್ಯಭಾವಮಿಂ
ತಿದು ನವವೃತ್ತಿ ಲೇಸಿದು ರಸಸ್ಥಿತಿ ನೂತ್ನಮಿದಲ್ತೆ ನೂತನಂ
ಪದರಚನಾವಿಲಾಸಮಿದು ಕಬ್ಬಮಪೂರ್ವಮಿದೆಂದು ಕಬ್ಬಿಗರ್
ಪದೆದೊಲವಿಂದೆ ಕೀರ್ತಿಸೆ ನಿಮಿರ್ಚುವೆನೀ ಸುಭಗಪ್ರಬಂಧಮಂ

ಎಂದು ಗಿರಿಜಾಕಲ್ಯಾಣದಲ್ಲಿ ಹೇಳಿದ ಮಾತು ಅವನ ಎಲ್ಲ ಕಾವ್ಯಗಳಿಗೂ ಅನ್ವಯಿ ಸುತ್ತದೆ. ಪೊಸರೀತಿ, ನವೀನ ಅಲಂಕೃತಿ, ನವ್ಯಭಾವ, ನವವೃತ್ತಿ, ಲೇಸಾದ ರಸಸ್ಥಿತಿ, ನೂತನತೆ, ಪದರಚನಾವಿಲಾಸ, ದೃಷ್ಟಾಂತಗಳನ್ನು ಕೊಡುವ ರೀತಿ, ಕಲ್ಪನೆಯ ಸೊಗಸುಗಳಲ್ಲಿ ನಾವೀನ್ಯತೆ ಇದೆ.

ಶತಕಗಳಲ್ಲಿ ವರ್ಣಿಸುವ ಬಾಲ್ಯ, ಯೌವನ, ಮುಪ್ಪುಗಳ ವರ್ಣನೆಯಲ್ಲಿ ಸ್ವಾಭಾವಿಕತೆ ತಲೆದೋರಿ ಕಾವ್ಯದ ಮೆರುಗಿಗೆ ಪುಟವಿಟ್ಟಂತಿದೆ. ಮಾಹಾನೀತಿ ಯನ್ನು ಜ್ಞಾನದ ಕಾವ್ಯದ ತುಂಬೆಲ್ಲಾ ಪ್ರಸ್ತಾಪಿಸುತ್ತಾನೆ.

---

೧ ತಂಡೇಶಪಿಳ್ಳೆಯ ಕಥೆ; ಕಲ್ಯಾಣ ಮಾಸಪತ್ರಿಕೆಯಲ್ಲಿ ಕ್ರಿ. ಶ. ೧೯೩೪ರಲ್ಲಿ ಪ್ರಕಟವಾದದ್ದು. ಸಂಪಾದಕರು ಶ್ರೀ ಮಲ್ಲಾಬಾದಿ, ವೀರಭದ್ರಪ್ಪ ಶ್ರೀ ಲಿಂಗನಗೌಡ ಅಂದಾನಗೌಡ ಪಾಟೀಲ ಚಿಕ್ಕೊಪ್ಪ; ಪ್ರಕಾಶಕರು, ಶ್ರೀ ಮಲ್ಲಿಕಾರ್ಜುನಪ್ಪ ಪರಪ್ಪ ಕಲ್ಬುರ್ಗಿ, ಮೈಲೇಶ್ವರ ತಾಳಿಕೋಟ. ಸಂಪುಟ ೨. ಸಂಚಿಕೆ ೩

ಆತನ ಸಂದೇಶಗಳು ಒಂದೇ ಎರಡೇ ಹಲವಾರು ಸಂದೇಶಗಳಿವೆ. ಪ್ರತಿಯೊಂದು ಮಾತು ದಿವ್ಯಸಂದೇಶವಾಗಿದೆ. ಜಗತ್ತಿನ ಜ್ಞಾನಭಾಂಡಾರಕ್ಕೆ ಸುಲಭವಾದ ಕಾಣಿಕೆಯಾಗಿವೆ. ಮುತ್ತಿನಂತಹ ಬಿಡಿಮಾತುಗಳಿವೆ.

ಮೃಡ, ನೀ ಕಲ್ಲೊಳಗೇಕೆ ಪೊಕ್ಕುಸರದಂತಿರ್ದಪೆ? ನೀಂ
ಕೊಡೆ ನಿನ್ನಿಲ್ಲೆನೆ ಸಾಲದೇನಡಗಲೇಕಿಲ್ಲೆಂಬುದಂ ಬಲ್ಲೆವಿ
ಟ್ಟೊಡಲಿಂಗಿಲ್ಲದೆ ಮೇಣ್ ಪರಾನ್ನದುಣಿಸಿಂ ದಾರಿದ್ರನೀನಾವಗಂ
ಬಡವಂ ಬಲ್ಲೆವು ಬೇಡೆಮುಂಜದಿರೆಲೆ ಪಂಪಾಪುರಾಧೀಶ್ವರಾ[೧]

ಎಂದು ಪರಮಾತ್ಮನನ್ನು ಕುರಿತು ಮಾಡಿದ ವಿಡಂಬನೆ ಗಮನಾರ್ಹವಾಗಿದೆ. ಪರಮಾತ್ಮನನ್ನು ಜೀವಕಳೆದುಂಬಿ, ಮಾತಾಡಿಸುವ ರೀತಿ, ಅಲೌಕಿಕವಾಗಿದೆ. ಶಿವನಿಗಿಂತಲೂ ಶರಣರಧಿಕರು, ದಾನಿಗಳು ಎಂಬುದಕ್ಕೆ ಇದೊಂದನ್ನೇ ನಿದರ್ಶನವಾಗಿಟ್ಟುಕೊಂಡರೆ ಸಾಕಾಗಬಹುದು.

ಕನ್ನಡಸಾಹಿತ್ಯಪ್ರಪಂಚದಲ್ಲಿ ಅಮೋಘವಾದ ಶಕ್ತಿಯುಳ್ಳಂ ಕವಿ. ಭಕ್ತನ ಉತ್ಕಟಭಾವ, ಕವಿಯ ಶಕ್ತಿಯುತವಾಣಿ ಇವುಗಳ ಸಮರಸ ಆತನ ಕಾವ್ಯಗಳಲ್ಲಿ ಕಂಡುಬರುತ್ತದೆ. ಚಂಪುವಿನ ಸಂಪ್ರದಾಯದ ಲಕ್ಷಣಗಳೆಂಬ ಹೊನ್ನಸಂಕಲೆಗಳಿಂದ ಕನ್ನಡ ಕಾವ್ಯವನಿತೆಯನ್ನು ಬಿಡುಗಡೆ ಮಾಡಿದ ಕೀರ್ತಿ ಹರಿಹರನದು. ಭಾರವಾದ ತೊಡವುಗಳಿಂದ ಕೊರಗುತ್ತಿದ್ದ ಕನ್ನಡಕಾವ್ಯವನಿತೆಯ ಭಾರವನ್ನು ಇಳುಹಿದನು. ಹರಿಹರನ ರಗಳೆಯಲ್ಲಿ ಹೊಸರೀತಿಯ ಭಾಷೆಯನ್ನು ಅನುಸರಿಸಿ, ಕನ್ನಡ ಭಾಷೆಯ “ನಾವೀನ್ಯಕ್ಕೆ” ಹೊಸ ಸ್ವರೂಪಕ್ಕೆ ಕಾರಣನಾಗಿದ್ದಾನೆ.

ಹರಿಹರನು ಕನ್ನಡ ಸಾಹಿತ್ಯಕ್ಕೆಯೇ ಆದರ್ಶಕವಿ. ವೀರಶೈವರಲ್ಲಿ ಅಗ್ರಕವಿ, ಪಂಪನಿಗೆ ಜೈನಕವಿಗಳು ತಮ್ಮ ಕಾವ್ಯಗಳಲ್ಲಿ ಸಲ್ಲಿಸಿದ ಗೌರವವನ್ನು ಮುಂದಿನ ವೀರಶೈವಕವಿಗಳು ಸಲ್ಲಿಸುತ್ತಲಿದ್ದಾರೆ. ಈತನು ವರ್ಣಕ ಕಾವ್ಯ ಸಂಪ್ರದಾಯದ ಆದಿಕವಿಯೂ, ಅಹುದೆ. ಹರಿಹರನು ಹಿರಿಯಕವಿ; ಅರಸುಕವಿ, ಭಕ್ತಕವಿ, ಕ್ರಾಂತಿಪುರುಷ. ಈ ಮಹಾಕವಿಯ ಪಾಂಡಿತ್ಯದಿಂದೊಡಗೂಡಿದ

---

೧ ರಕ್ಷಾಶತಕ ಪಂಪಾಶತಕ

ಪ್ರತಿಭೆ, ಈ ಶ್ರೀಷ್ಮಭಕ್ತನ ತಲ್ಲೀನತೆ, ಈ ಎದೆಗಾರ ಕ್ರಾಂತಿಪುರುಷನ ಭಾಷೆಯ ಇಂಪು, ಇವುಗಳ ಮುಪ್ಪುರಿಯು ಕನ್ನಡಿಗರಿಗೆ ಎಂದೂ ಬತ್ತದ ಸೊಗಸಿನ ಬುಗ್ಗೆಯಾಗಿದೆ.][೧] ಎಂಬ ಮಾತುಗಳು ಯಥಾರ್ಥವಾಗಿವೆ.

ಏನೇ ಇದ್ದರೂ ಹರಿಹರನ ಕಾವ್ಯಗಳಲ್ಲಿ ದಿವ್ಯದರ್ಶನವಡಗಿದೆ. ಆತನ ದರ್ಶನವನ್ನು ಆತನ ಕಾವ್ಯಗಳಲ್ಲಿ ಕಂಡುಬರುವ, ಶಿವಾನುಭಾವದಲ್ಲಿ ಕಾಣ ಬಹುದಾಗಿದೆ. ಒಟ್ಟಿನಲ್ಲಿ ಹರಿಹರನು ಸತ್ಯದ ಸಾರ್ವಭೌಮ, ಸಾಹಿತ್ಯದ ಭೂಷಣ, ಶೈವಪ್ರತಾಪತೇಜಃಪ್ರಭಾಕಿರಣ. ಪರರ ಅರ್ಥಕ್ಕೆ ಕೈಹಾಕುವ ಪಿರಿಯತನದ ಕವಿಯಲ್ಲ.

## ಹರೀಶ್ವರನ ಕಾವ್ಯಗಳಲ್ಲಿ ನಾಟಕೀಯತೆ

ವಿಶ್ವಕವಿ ರವೀಂದ್ರನಾಥ ಟ್ಯಾಗೋರ್ ಅವರು, ಕವಿಯ ಸ್ವರೂಪದರ್ಶನ ವನ್ನು ಕುರಿತು "*Poet is the spirit of the age, through him the Nation speakes*" ಈ ಪ್ರಕಾರ ಹೇಳಿರುವಂತೆ ೧೨ನೆಯ ಶತಮಾನದಲ್ಲಿ ಸಂಭವಿಸಿದ ಸಕಲ ಜೀವರಾಶಿಗಳಿಗೆ ಲೇಸನ್ನೇ ಬಯಸುವ ಕಲ್ಯಾಣಕ್ರಾಂತಿಯ ಪ್ರಜಾಪ್ರಭುತ್ವಧರ್ಮ ಪ್ರಭಾವವುಳ್ಳ ಭಕ್ತಿಯುಗದ ಶಕ್ತಿಯು ಅರಸರು ಕೊಡುವ ಕಂಕಣಕ್ಕೆ ಮನವೆಳಸದ, ಯಾರ ಹಂಗಿಗೂ ಹರಿಗೂ ಒಳಗಾಗದ, ಸರ್ವತಂತ್ರ ಸ್ವತಂತ್ರಶೀಲನೂ ಶಿವಯೋಗಚಕ್ರೇಶ್ವರನೂ ಆದ ಹಂಪೆಯ ಹರಿಹರದೇವ ನಲ್ಲಿ ಆಶ್ರಯ ಪಡೆಯಿತು. ಆ ಉಜ್ವಲ ಸ್ಫೂರ್ತಿ ಉತ್ಸಾಹಗಳಿಂದ ಹರೀಶ್ವರನು ತನ್ನ ಸ್ವಂತ ನಾಟಕಶಾಲೆಯಾದ ಪಂಪಾಕ್ಷೇತ್ರ ರಂಗಭೂಮಿನ್ನು ಏಕಪಾತ್ರಾಭಿ ನಯ ಪಟುವಾಗಿ ಪ್ರವೇಶಿಸುವನು. ಕಿಕ್ಕಿರಿಗಿರಿದ ಭಕ್ತಿಸಂಪನ್ನರಾದ ನೆಗೆಮೊಗದ ಸಿರಿಮೊಗದ ಪ್ರೇಕ್ಷಕರ ಮಧ್ಯದಲ್ಲಿ ಪ್ರಕಾಶಿಸುವ ಶ್ರೀ ಪಂಪಾಂಬಿಕೆ ವಿರೂಪಾಕ್ಷ ರನ್ನು ನೋಡುವನು. ತತ್‍ಕ್ಷಣ "ಶ್ರೀ ಗುರುವೆ ಹಂಪೆಯ ವಿರೂಪಾಕ್ಷ ಕೇಳಯ್ಯ ನಾನಭಿನಯಿಸುವ ನಾಟಕವ ಪಂಪಾಂಬಿಕೆಯೊಡನೆ ನೋಡಯ್ಯ" ಎಂದು

---

ರಕ್ಷಾಶತಕ ಹಾಗೂ ಪಂಪಾಶತಕಗಳ ಮುನ್ನುಡಿ; ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ ಸಾಹಿತ್ಯ ಸಮಿತಿಯುವರು ಪ್ರಕಟಿಸಿದ್ದು. ಧಾರವಾಡದ ಶ್ರೀಮನ್ನಿರಂಜನ ಜಗದ್ಗುರು ಮುರುಘರಾಜೇಂದ್ರ ಪ್ರಸಾದವಿ[illegible]ದ ಬೆಳ್ಳಿಹಬ್ಬದ ಪ್ರಕಟನೆ, ಕ್ರಿ. ಶ. ೧೯೪೩ ಸಂಪಾದಕರು ಪ್ರೊ. ಶಿ. ಶಿ. ಬಸವನಾಳ ಎಂ. ಎ. ಅವರು

ಸಲುಗೆಯಿಂದ ನಾಂದೀಗೀತೆಯನ್ನು ಹಾಡುವನು. "ಇಂತಪ್ಪ ನಾಟಕವ ನೋಡಿ ಬಲ್ಲೆಯಾ ಗಿರಿಜೆ; ಅದು ಮಾಣ್ಗೆ, ಇಂತಪ್ಪ ಮಾತುಗಳ ಕೇಳಬಲ್ಲೆಯಾ ದೇವೀ" ಎಂದು ಮುಕ್ಕಣ್ಣನು ಮಾತನಾಡಲು ಜನ್ಮಾಂತರದಲ್ಲಿಯೂ ಸಹಾ ಇಲ್ಲವೆಂದು ಉದ್ಗಾರತೆಗೆಯುವಳು! ಪ್ರೇಕ್ಷಕರಂತೂ ಭಕ್ತಿರಸದ ಹೊಸ ಸೊಬಗಿನ ನಾಟಕವನ್ನು ನೋಡಿ ಉಘೇ ಚಾಂಗು ಭಲಾ! ಭೇಷ್ ಭೇಷ್ !! ಎಂದು ತಮ್ಮ ಮೆಚ್ಚಿಗೆ ವ್ಯಕ್ತಪಡಿಸುವರು. ಭಾವಭರಿತ ಭಕ್ತಿಯ ಸೊಗಸಿನ ರಸಿಕತೆಯು ಕುಶಲತನದಿಂದ ನೋಡುವ, ಮೃದುಮಧುರ ಪದಗಳನ್ನು ಕೇಳುವ ಪ್ರೇಕ್ಷಕರ ಮುಖವನಾಶ್ರಯಿಸಿದ ಮನದವಸ್ಥೆಯನ್ನು ನೋಡುತ್ತ ನೋಡುತ್ತ ಮತ್ತಷ್ಟು ಸ್ಫೂರ್ತಿಗೊಂಡು ಅಭಿನಯಿಸುವನು. ಗಿರಿಜಾಕಲ್ಯಾಣ ಮಹಾ ಪ್ರಬಂಧ, ರಕ್ಷಾಶತಕ ಪಂಪಾಶತಕ ಮುಡಿಗೆಯ ಅಷ್ಟಕಗಳನ್ನು ಮೊದಲು ರಚಿಸಿ, ಅರವತ್ತುಮೂವರು ಪುರಾತನರು, ರೇವಣಸಿದ್ಧಾದಿನೂತನರು ಬಾಣಮಯೂರ ಹಲಾಯುಧ ಕಾಳಿದಾಸ* ಮಲುಹಣ ಕವೀಶ್ವರರೇ ಮೊದಲಾದ ಪುರಾತನ ಹಾಗೂ ನೂತನ ಶರಣರ ನೂರೊಂದು ಚರಿತ್ರೆಗಳನ್ನು ಲಲಿತ, ಮಂದಾನಿಲ ಉತ್ಸಾಹರಗಳೆಯ ಛಂದಸ್ಸಿನಲ್ಲಿ, ಗದ್ಯಪದ್ಯವಲ್ಲಿ, ನಾಟಕೀಯತೆಯಿಂದ ನಿರೂಪಿಸುತ್ತಾನೆ. ಒಟ್ಟಾರೆ ನೂರೊಂದೋ, ನೂರೆಂಟೋ, ನೂರಿಪ್ಪತ್ತೋ, ಎಷ್ಟೊಂದು ಕೃತಿಗಳನ್ನು ಹರೀಶ್ವರನು ರಚಿಸಿರುವನೆಂದು ಇದುವರೆಗೆ ನಿರ್ಣಯಾತ್ಮಕವಾಗಿ ಯಾರಿಗೂ ಲೆಕ್ಕ ಸಿಕ್ಕಿರುವುದಿಲ್ಲ.[೧]

## ಕವಿಯ ಕಾಲ

ಕನ್ನಡಸಾಹಿತ್ಯದ ಬೆಳವಣಿಗೆಯ ಇತಿಹಾಸವನ್ನು ವಿವೇಚಿಸುವಾಗ ಕವಿಗಳ ಕಾಲಮಾನವನ್ನಳೆಯುವುದು ಇತಿಹಾಸಕಾರರ ಸಂಶೋಧಕರ ಹಾಗೂ

---

೧ ಸುಪ್ರಸಿದ್ಧ ನಟರೂ ಕವಿಗಳೂ ಆದ ಶ್ರೀಮಾನ್ ಜೋಳದರಾಶಿ ಕೆಂಗಲ್ಲು ದೊಡ್ಡನಗೌಡರು ರವಿವಾರ ದಿ. ೫-೧೨-೧೯೬೯ರಲ್ಲಿ ಬಳ್ಳಾರಿ ಜಿಲ್ಲಾ ಕನ್ನಡ ನಾಟಕ ಕಲಾಪರಿಷತ್ತಿನ ಪ್ರಥಮ ಅಧಿವೇಶನವನ್ನು ತಮ್ಮ ಗ್ರಾಮವಾದ ಜೋಳದರಾಶಿಯಲ್ಲಿ ನೆರವೇರಿಸಿದಾಗ ಶ್ರೀ ಮಲ್ಲಾಬಾದಿಯವರು ಮಾಡಿದ ಭಾಷಣದ ಒಂದು ಭಾಗ.

* ಅನೇಕ ಭಾಷೆಯಲ್ಲಿಯ ಕವಿಗಳು ಕಾಳಿದಾಸನನ್ನು ಮನವಾರೆ ಕೊಂಡಾಡಿದ್ದರೂ ಅವನ ಮೇಲೆ ಹರಿಹರನ ಹೊರತು ಯಾರೂ ಕಾವ್ಯ ಬರೆದಂತಿಲ್ಲ.

ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಿಗೆ ಅಪೇಕ್ಷಿತ ಅಭಿರುಚಿಯುಳ್ಳ ಮಹತ್ವದ ವಿಷಯವಾಗಿದೆ. ಆದ್ದರಿಂದ ಈ ಮೊದಲು ಸಂಶೋಧಿತವಾಗಿ ಒಟ್ಟುಗೂಡಿದ ವಿಚಾರಗಳನ್ನು ಕನ್ನಡನಾಡಿನ ಸುಪ್ರಸಿದ್ಧ ವಿದ್ವಾಂಸರೂ ಕನ್ನಡ ಹಾಗು ಇತಿಹಾಸದ ಪ್ರೊಫೆಸರ್ ಆದ ಪೂಜ್ಯ ಶ್ರೀ ಶಿ. ಶಿ. ಬಸವನಾಳ ಎಂ. ಎ. ಅವರು ಹರೀಶ್ವರನ ಕಾಲದ ವಿಚಾರದಲ್ಲಿ ಹೀಗೆ ಹೇಳಿದ್ದಾರೆ.

ಹರೀಶ್ವರನ ಕಾಲವು ಇನ್ನೂ ಸರಿಯಾಗಿ ನಿರ್ಧಾರವಾಗಿಲ್ಲ. ರೆ|| ಕಿಟ್ಟಲ್ ಅವರು (ಛಂದೋಂಬುಧಿ ಉಪೋದ್ಘಾತ ಪುಟ ೫೩) ಈ ಕವಿಯ ಕಾಲವು ಸುಮಾರು ಕ್ರಿ. ಶ. ೧೨೮೩ ಇದ್ದಿರಬೇಕೆಂದು ತರ್ಕಿಸಿದ್ದಾರೆ. ಕವಿಚರಿತೆಕಾರರು ( ಭಾಗ ೧ ಪು. ೨೧೯—೨೨೨ ) ಹರೀಶ್ವರನು ಕ್ರಿ. ಶ. ೧೧೬೫ರಲ್ಲಿ ಇದ್ದಿರಬೇಕೆಂದು ಅನೇಕ ಆಧಾರಗಳೊಂದಿಗೆ ಊಹಿಸಿದ್ದಾರೆ. "ಕೆಲವು ಕನ್ನಡದ ಕವಿಗಳ ಜೀವನದ ಕಾಲ" ಎಂಬುದರ ಕರ್ತರಾದ ಡಾಕ್ಟರ್ ವೆಂಕಟಸುಬ್ಬಯ್ಯನವರು (ಪು. ೨೬೦–೨೬೮) ಕವಿಚರಿತೆಕಾರರ ಊಹೆಯನ್ನು ಆಕ್ಷೇಪಿಸಿದ್ದಾರೆ. ಕವಿಚರಿತೆಕಾರರಾದ ಮಹಾಮಹೋಪಾಧ್ಯಾಯ ಪ್ರಾಕ್ತನವಿಮರ್ಶನ ವಿಚಕ್ಷಣ ರಾವಬಹಾದ್ದೂರ್ ಆರ್. ನರಸಿಂಹಾಚಾರ್ಯರು (ಕವಿಚರಿತೆ ಭಾಗ ೩ ಪುಟ lxv–lxixರಲ್ಲಿ) ಈ ಆಕ್ಷೇಪಣೆಗಳಿಗೆ ಕೆಲವು ಸಮಾಧಾನಗಳನ್ನು ಹೇಳಿದ್ದಾರೆ. ಆದರೆ ಇತ್ತೀಚೆಗೆ ಪ್ರಕಟವಾಗಿರುವ "ಬಸವರಾಜದೇವರ ರಗಳೆ" "ಅಲ್ಲಮಪ್ರಭುದೇವರ ರಗಳೆ" "ಮಹಾದೇವಿಯಕ್ಕನ ರಗಳೆ" ಎಂಬ ಗ್ರಂಥಗಳು ಹರಿಹರಕೃತಗಳು ಎಂಬುದಕ್ಕೆ ಪ್ರಬಲ ಕಾರಣಗಳಿರುವುದರಿಂದಲೂ ಈ ಕವಿಯ ಸೋದರಳಿಯನಾದ ರಾಘವಾಂಕನು "ಸಿದ್ಧರಾಮೇಶ್ವರ ಚರಿತ್ರೆ" ಯನ್ನು ಬರೆದಿರುವುದರಿಂದಲೂ ಹರೀಶ್ವರನು ಬಸವ ಅಲ್ಲಮ ಮಹಾದೇವಿಯಕ್ಕ ಸಿದ್ಧರಾಮೇಶ್ವರ ಇವರ ಕಾಲದಿಂದ ಈಚೆಯವನೆನ್ನಲು ಸಂದೇಹವಿಲ್ಲ. ಸುಮಾರು ಒಂದು ತಲೆಯಾದರೂ ಈಚೆಯವನಾಗಿರಬೇಕು. ಬಸವೇಶ್ವರ ಮೊದಲಾದವರ ಕಾಲವು ಸುಮಾರು ಕ್ರಿ. ಶ. ೧೧೬೦ ಎಂದು ಗ್ರಹಿಸಿದರೆ ಹರೀಶ್ವರನ ಕಾಲವು ಕ್ರಿ. ಶ. ೧೧೯೦ ಎಂದು ಅನುಮಾನಿಸಬಹುದು. ಈ ಕಾಲಕ್ಕೂ ಕವಿ ಚರಿತೆಕಾರರು ( ಭಾಗ ೩ ಪುಟ lxv–lxix ರಲ್ಲಿ ) ಹೇಳಿದ ಕಾಕತೀಯ ರಾಜನಾದ ಪ್ರತಾಪರುದ್ರನ ಕಾಲ ( ೧೧೪೦–೧೧೯೬) ಕ್ಕೂ ವ್ಯತ್ಯಾಸವೇನೂ ಉಂಟಾಗುವುದಿಲ್ಲ. ಇನ್ನು ಮಲ್ಲಿಕಾರ್ಜುನನ ಸೂಕ್ತಿಸುಧಾರ್ಣವದಲ್ಲಿ

ಹರೀಶ್ವರನ ಪದ್ಯಗಳು ದೊರೆಯುವುದರಿಂದ ಹರೀಶ್ವರನು ಕ್ರಿ. ಶ ೧೨೪೫ಕ್ಕಿಂತ ಮೊದಲಿನವನೆನ್ನಲು ಆವ ಸಂಶಯವೂ ಇಲ್ಲ. ಪ್ರೊ. ಕುಂದಣಗಾರ ಮತ್ತು ಪ್ರೊ. ಮಾಳವಾಡ ಇವರು ಹಂಪೆಯ ವಿರೂಪಾಕ್ಷದೇವಾಲಯದಲ್ಲಿ ಉರಿಯುತ್ತಿದ್ದ ತೆರೆಯನ್ನು ಆರಿಸಿದನೆಂಬ ಪವಾಡವು ನೆಡೆದ ಕಾಲವು ಕ್ರಿ. ಶ. ೧೨೧೬ ಎಂದು ನಿರ್ಧರಿಸಿದ್ದಾರೆ. ಒಟ್ಟಿನಲ್ಲಿ ಕ್ರಿ. ಶ. ೧೨ನೆಯ ಶತಮಾನದ ಕೊನೆಯಲ್ಲಿ ಕವಿಯು ಜೀವಿಸುತ್ತಿದ್ದನೆಂದು ನಿರ್ಣಯಿಸಬಹುದು.[೧]

ಹರೀಶ್ವರನ ಕಾಲ ಕ್ರಿ. ಶ. ೧೨೦೦ ಇರಬೇಕೆಂದು ರಾಷ್ಟ್ರಕವಿ ಶ್ರೀ ಮಂಜೇಶ್ವರದ ಗೋವಿಂದ ಪೈ ಅವರು ಶರಣಸಾಹಿತ್ಯದಲ್ಲಿ ಬರೆದಿದ್ದಾರೆ. ಶ್ರೀ ಮದನಾದಿ ಅಲ್ಲಮಪ್ರಭು ನಿರಂಜನ ಜಗದ್ಗುರು ಗ್ರಂಥಮಾಲೆಯ ಸಂಪಾದಕರೂ, ಸುಪ್ರಸಿದ್ಧ ಇತಿಹಾಸ ಸಂಶೋಧಕರೂ ಅನುಭಾವಿಗಳೂ ಆದ ಶ್ರೀ ಪುರಾಣಿಕ ಬುದ್ಧಯ್ಯಸ್ವಾಮಿಗಳು ಹರೀಶ್ವರನ ಕಾಲ ಕ್ರಿ. ಶ. ೧೨೦೦ ಇರಬೇಕೆಂದು ತರ್ಕಿಸಿದ್ದಾರೆ.[೨] ಆದರೆ ಶ್ರೀ ಎಚ್. ದೇವೀರಪ್ಪನವರು ಶ್ರೀ ದೇ. ಜವರೇಗೌಡರು ಸಂಪಾದಿಸಿದ ಗಿರಿಜಾಕಲ್ಯಾಣ ಮಹಾಪ್ರಬಂಧ ಸಂಗ್ರಹದ ಪೀಠಿಕೆಯಲ್ಲಿ ಇದುವರೆಗೂ ಈ ದಿಸೆಯಲ್ಲಿ ಹಲವಾರು ಪಂಡಿತೋತ್ತಮರು ಹರೀಶ್ವರನ ಕಾಲನಿರ್ಣ್ಣಯದ ಬಗ್ಗೆ ಮಾಡಿದ ವಾದವಿವಾದ ಪ್ರತಿವಾದಗಳನ್ನು ಕೊಟ್ಟು ಕೊನೆಗೆ ಹರಿಹರನು ಸುಮಾರು ಕ್ರಿ. ಶ. ೧೨೦೦ರಷ್ಟರಲ್ಲಿ ಜನ್ಮವೆತ್ತಿ ೧೨೪೫ರ ಸುಮಾರಿನ ವರೆಗೆ ಬದುಕಿದ್ದನೆಂದು, ಪುರಾಣದ ಮಾಯಿದೇವಭಟ್ಟ ಕೆರೆಯಪದ್ಮರಸ ರಾಘವಾಂಕರು ಸುಮಾರು ೧೩೦೦ ರ ಹೊತ್ತಿಗೂ ಇದ್ದಿರಬಹುದೆಂದು ಸದ್ಯಕ್ಕೆ ಹೇಳಬಹುದು ಎಂದಿದ್ದಾರೆ.[೩]

---

೧ ಹುಬ್ಬಳ್ಳಿ ಶ್ರೀ ಜಗದ್ಗುರು ಮೂರುಸಾವಿರ ಮಠದ ಗ್ರಂಥಮಾಲಾ ಸಂ. ೧೧ ಕೊಲ್ಲಾಪೂರ ರಾಜಾರಾಮ ಕಾಲೇಜ ಕರ್ನಾಟಕ ಸಂಘದ ಗ್ರಂಥಮಾಲಾ ೧ ರಲ್ಲಿ ಪ್ರಕಟವಾದ ಹರಿಹರದೇವ ಗ್ರಂಥದಲ್ಲಿ ಪ್ರೊ. ಶಿ. ಶಿ. ಬಸವನಾಳರು ಬರೆದ ಹರಿಹರದೇವನ ಗಿರಿಜಾಕಲ್ಯಾಣ ಲೇಖನ ಪುಟ ೨೩೫–೨೩೬, ಕ್ರಿ. ಶ, ೧೯೩೬

೨ ಶಿವಾನುಭವ ಸಂಪುಟ ೯ ಸಂಚಿಕೆ ೨

೩. ಗಿರಿಜಾಕಲ್ಯಾಣ ಮಹಾಪ್ರಬಂಧ ಸಂಗ್ರಹ ಪುಟ xiv

ಪ್ರಸಿದ್ಧ ವಿದ್ವಾಂಸರೂ ಮೈಸೂರು ವಿಶ್ವವಿದ್ಯಾಲಯದ ಕನ್ನಡ ಪ್ರಾಧ್ಯಾಪಕರೂ ಆದ ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್ಯರು ರಾಘವಾಂಕ ಕವಿಯ ಕಾಲವನ್ನು ಆಳವಾದ ಸಂಶೋಧನೆಯಿಂದ ವಿಮರ್ಶಿಮಾಡಿ ನಿಷ್ಕರ್ಶಿಸುತ್ತಾ ಹರೀಶ್ವರನ ಬಗೆಗೆ ಈ ಕೆಳಗಿನ ಅಭಿಪ್ರಾಯ ಪಟ್ಟಿದ್ದಾರೆ.

(೭) ಕೆರೆಯಪದ್ಮರಸನು ತ್ರಿಭುವನ ತಾತನನ್ನು ವಾದದಲ್ಲಿ ಗೆದ್ದದ್ದು "ದೋರಸಮುದ್ರಮೆಂಬ ಪೆಸರಿಂ ಕರಮೊಪ್ಪುವ ರಾಜಧಾನಿಯೊಳ್ ವೀರ ನೃಸಿಂಹಭೂವರನಹೋ ಮಹಿಯುಂ ಪರಿಪಾಲಿಸುತ್ತಿ"ರುವಾಗ ಎಂದು ಕುಮಾರ ಪದ್ಮರಸನ ಗ್ರಂಥಾದಿಯ ಹೇಳಿಕೆ. ೧೨೦೦ಕ್ಕಿಂತ ಹಿಂದೆ ಇದ್ದ ವೀರನರಸಿಂಹನು, ಕವಿಚರಿತೆಕಾರರೂ ಶ್ರೀಮಾನ್ ಗೋವಿಂದ ಪೈಯವರೂ ಹೇಳುವಂತೆ ೧೧೪೧—೧೧೭೩ರ ವರೆಗೆ ಆಳಿದ ಒಂದನೆಯ ನರಸಿಂಹಬಲ್ಲಾಳನಿರಬೇಕು.

(೮) ರಾಘವಾಕನು ಓರುಂಗಲ್ಲಿಗೆ ಹೋಗಿ ಕಾಕತೀಯರುದ್ರನ ಸಭೆಯಲ್ಲಿ ತನ್ನ 'ಮೀಸಲುಗವಿತೆ'ಯಾದ ವೀರೇಶ ಚರಿತೆಯನ್ನು ರಚಿಸಿ ಕುಕವಿಗಳನ್ನು ಸೋಲಿಸಿದನೆಂಬ ಕಥೆಯಲ್ಲಿ ಸತ್ಯಾಂಶವಿರುವಂತೆ ಕಾಣುವುದರಿಂದ ಆ ಪ್ರತಾಪರುದ್ರನು ೧೧೬೩—೧೧೯೫ರ ವರೆಗೆ ಆಳಿದ ಕಾಕತೀಯ ರಾಜನೇ ಇದ್ದಿರಬೇಕು.

ಈ ಆಧಾರಗಳಿಂದ ಹರಿಹರನು ಒಂದನೆಯ ನರಸಿಂಹನ ಆಳಿಕೆಯಲ್ಲಿಯೇ, ಅವನ ಮಗನಾದ ಎರಡನೆಯ ವೀರಬಲ್ಲಾಳನಲ್ಲಿಯೋ ೧೧೭೩ ಕೆಲವು ವರ್ಷ ಕರಣಿಕನಾಗಿದ್ದು ಹಂಪೆಗೆ ಬಂದು ಅಲ್ಲಿ ನೆಲಸಿ ೧೨೦೦ ಸುಮಾರಿಗೆ ಪಂಪಾಶತಕ ಗಿರಿಜಾಕಲ್ಯಾಣಗಳನ್ನು ರಚಿಸಿ ಆಮೇಲೆ ರಗಳೆಗಳನ್ನು ಬರೆದು ಎರಡನೆಯ ನರಸಿಂಹನ ಆಳಿಕೆಯ ಪ್ರಾರಂಭದಲ್ಲಿ ಎಂದರೆ ಸುಮಾರು ಕ್ರಿ. ಶ. ೧೨೨೫ರಲ್ಲಿ ವಿರೂಪಾಕ್ಷನಲ್ಲಿ ಐಕ್ಯವಾದಂತೆ ಊಹಿಸಬಹುದು."[೧]

---

೧. ರಾಘವಾಂಕ ಕವಿಯ ಸಿದ್ಧರಾಮಚಾರಿತ್ರ ಪೀಠಿಕೆ ಪುಟ xxi ಕ್ರಿ.ಶ. ೧೯೪೧ ಸಂಪಾದಕರು ಪ್ರೊ. ಟಿ. ಎಸ್. ವೆಂಕಣ್ಣಯ್ಯ. ಎಂ.ಎ., ಶ್ರೀ ಡಿ. ಎಲ್ ನರಸಿಂಹಾಚಾರ. ಎಂ. ಎ. ಅವರು

# ದೋರಸಮುದ್ರದ ಹೊಯಿಸಳರು

## ( ಕ್ರಿ. ಶ. ೧೧೦೦-೧೨೭೩ )

ಆರಂಭದಲ್ಲಿ ಚಾಲುಕ್ಯರ ಒಡೆತನವನ್ನಪ್ಪಿ ಸಾಮಂತರಾಜರಾಗಿ ಮೊದಲನೆಯ ಬಲ್ಲಾಳನ ಮಗ ಬಿಟ್ಟಿದೇವನು ಕಲ್ಯಾಣಚಾಲುಕ್ಯರ ಮತ್ತು ಚೋಳರಸರ ದ್ವಂದ್ವಕಾಲದಲ್ಲಿ ಹೊಯಿಸಳ ರಾಜ್ಯವನ್ನು ವಿಸ್ತರಿಸಿಕೊಂಡನು. (ಕ್ರಿ. ಶ. ೧೧೧೧-೧೧೪೧) ಶ್ರೀ ವೈಷ್ಣವ ಮತಸ್ಥಾಪಕರಾದ ಶ್ರೀ ರಾಮಾನುಜಾಚಾರ್ಯರ ಶಿಷ್ಯತ್ವವನ್ನು ಪರಿಗ್ರಹಿಸಿ ಜೈನಮತವನ್ನು ತ್ಯಜಿಸಿ ತಾನು ನೂತನವಾಗಿ ಅವಲಂಬಿಸಿದ ಶ್ರೀ ವೈಷ್ಣವ ಮತಕ್ಕೆ ಪ್ರೋತ್ಸಾಹವಿತ್ತು ಪಂಡಿತರಿಗೂ ಕವಿಗಳಿಗೂ ಆಶ್ರಯವಿತ್ತು ಎಲ್ಲ ಮತದವರಲ್ಲಿ ಸಮವಾದ ವಿಶ್ವಾಸವನ್ನಿಟ್ಟ, ಬಿಟ್ಟಿದೇವನು ವಿಷ್ಣುವರ್ಧನನಾದನು. ಕ್ರಿ.ಶ. ೧೧೧೭ರಲ್ಲಿ ಬೇಲೂರಿನಲ್ಲಿ ಚನ್ನಕೇಶವ ದೇವಾಲಯವನ್ನು ಕಟ್ಟಿಸಿದನು. ಆತನ ಪಟ್ಟಮಹಿಷಿ ಮಹಾಕಲಾಪ್ರೇಮಿಯಾದ ಶಾಂತಲಾದೇವಿ ಶ್ರವಣಬೆಳಗೊಳ ಕ್ಷೇತ್ರದಲ್ಲಿ ' ಸವತಿ ಗಂಧವಾರಣ ' ಬಸ್ತಿಯನ್ನು ಕಟ್ಟಿಸಿದಳು— ಕ್ರಿ. ಶ. ೧೧೪೧ ರಲ್ಲಿ ಬಂಕಾಪುರದಲ್ಲಿ ಯುದ್ಧ ಮಾಡುತ್ತ ಕಾಲವಾದನು. ಈತನ ಮಗ ೧ನೆಯ ನರಸಿಂಹನು ( ಕ್ರಿ. ಶ. ೧೧೪೩-೧೧೭೩ ) ಸದಾ ಸುಖಲೋಲುಪನಾಗಿ ೧೧೭೩ರಲ್ಲಿ ಮೃತನಾದನು. ಅವನ ಮಗ ಸಾಹಸಿಯೂ ಸಮರ್ಥನೂ ಆದ ವೀರಬಲ್ಲಾಳನು (ಕ್ರಿ. ಶ. ೧೧೭೩-೧೨೨೦) ಪಟ್ಟಾಭಿಷಕ್ತನಾದನು. ( ಕ್ರಿ. ಶ. ೧೧೮೭ ) ರಲ್ಲಿ ಬನವಸೆ ಹಾನಗಲ್ಲ ಪ್ರಾಂತವನ್ನು ಗೆದ್ದು[೧] ತನ್ನ ರಾಜ್ಯದಲ್ಲಿ ಸ್ಥಿರಗೊಳಿಸಿ ತನ್ನ ರಾಜ್ಯದಲ್ಲಿರುವ ಸಮಸ್ತ ಪ್ರಜೆಗಳೂ ಸುಖಸಂಪತ್ತಿನಿಂದ ಬಾಳಬೇಕೆಂದು

---

೧. ಆದ್ದರಿಂದಲೇ ಅಂದಿನಿಂದ ಹಾನಗಲ್ಲು ಬನವಾಸಿ ನಾಡಿನಲ್ಲಿ ದೀಪಾವಳಿ ಬಲಿಪಾಡ್ಯಮಿ ಶುಭದಿವಸ ಬಹು ಸಡಗರ ಸಂಭ್ರಮದಿಂದ ಹೊಯಿಸಳವೀರಬಲ್ಲಾಳನ ರಾಜ್ಯಭಾರದ ನೆನಹಿಗಾಗಿ

ಬಲ್ಲಾಳ ಬಲವಿಂದ್ರನ ರಾಜ್ಯಕೆಲ್ಲರು ಸಿರಿವಂತರ |
ಬಲ್ಲಾಳ ಬಂದು ಬಾಗಿಲಿಗೆ ನಿಂತರ ಹುಲ್ಲುಕಡ್ಡೆಲ್ಲ ದವನವ ||

ಎಂಬ ಹಾಡನ್ನು ಹೆಂಗಳೆಯರು ಇಂದಿಗೂ ಹಾಡುವರು.

ರಾಜ್ಯಭಾರಮಾಡಿದನು. ಅವನು ಶೈವಮತವನ್ನು ಅವಲಂಬಿಸಿದನು. ಖ್ಯಾತನಾದ ಶಿವಶಕ್ತಿ ಪಂಡಿತನು ಆತನ ಗುರುವಾಗಿದ್ದನು. ಕೆರೆಯನ್ನು ಕಟ್ಟಿಸುವುದರಲ್ಲಿ ಹೆಸರು ಪಡೆದ ಕೆರೆಯ ಪದ್ಮರಸನು ಆತನ ಆಸ್ಥಾನದಲ್ಲಿದ್ದನು. ಕೆರೆಯ ಪದ್ಮರಸನಲ್ಲದೆ ನೇಮಿಚಂದ್ರ ರುದ್ರಭಟ್ಟ ಮುಂತಾದ ಉತ್ತಮ ಕವಿಗಳೂ ಈ ದೊರೆಯ ಆಶ್ರಯದಲ್ಲಿದ್ದು ರಾಜನ ಆಸ್ಥಾನಕ್ಕೆ ಪ್ರಶಸ್ತಿಯನ್ನುಂಟು ಮಾಡಿದರು.[೧]

ಸೂಕ್ತಿಸುಧಾರ್ಣವದ ಕರ್ತೃ ಮಲ್ಲಿಕಾರ್ಜುನನ ಮಗ ಕೇಶಿರಾಜನ "ಶಬ್ದಮಣಿದರ್ಪಣ"ದಲ್ಲಿಯೂ ಗಿರಿಜಾಕಲ್ಯಾಣದ ಪದ್ಯಗಳು ಬಂದಿರುವುದರಿಂದ ಆ ಕಾಲಕ್ಕಾಗಲೇ ಹರೀಶ್ವರನ ಕಾವ್ಯವು ಸಾಕಷ್ಟು ಪ್ರಸಿದ್ಧಿಯನ್ನು ಪಡೆದಿರಬೇಕು. ಹೀಗೆ ಇಷ್ಟೊಂದು ಪ್ರಸಿದ್ಧಿ ಹೊಂದಬೇಕಾದರೆ ಸುಮಾರು ಐವತ್ತು ವರ್ಷಗಳ ಅವಧಿಯಾದರೂ ಇದ್ದಿರಬೇಕೆಂದು ಅನುಮಾನಿಸಬಹು. ಆದ್ದರಿಂದ ಹರೀಶ್ವರನು ಸುಮಾರು ಕ್ರಿ. ಶ. ೧೨೦೦ರಲ್ಲಿ ಇದ್ದನೆಂದು ಹೇಳಬಹುದು.

ಉದ್ಭಟ ಕಾವ್ಯ (ಶೃಂಗಾರಸಾರ) ಕರ್ತೃ ಸೋಮರಾಜನು ಕ್ರಿ.ಶ. ೧೨೨೨ ರಲ್ಲಿ ತನ್ನ ಕಾವ್ಯವನ್ನು ಮುಗಿಸಿರುವುದಾಗಿ ಉಲ್ಲೇಖಿಸಿರುವುದರಿಂದಲೂ ಅದರಲ್ಲಿ ಹರಿಹರದೇವನನ್ನು ಸ್ತುತಿ[೨] ಮಾಡಿರುವುದರಿಂದಲೂ ಅವನಿಗಿಂತಲೂ ಪೂರ್ವದಲ್ಲಿ ಹರೀಶ್ವರನು ಇದ್ದಿರಬೇಕೆಂದು ಸ್ಪಷ್ಟವಾಗಿ ತೋರಿಬರುತ್ತದೆ.

---

೧. ಮೈಸೂರು ಕೈಪಿಡಿ ಪುಟ ೧೦೪—೧೦೯; ಬೆಂಗಳೂರು ೧೯೩೭. ಲೇಖಕಮಂಡಳಿ ಸದಸ್ಯರು:— ಶ್ರೀಮಾನ್ ಎಂ. ಆರ್. ಶ್ರೀನಿವಾಸಮೂರ್ತಿ ಬಿ.ಎ. ಶ್ರಿಮಾನ್ ಕೆ. ಕೃಷ್ಣಯ್ಯಂಗಾರ್ ಬಿ. ಎ. ಮತ್ತು ಶ್ರೀ ವಿ. ಸೀತಾರಾಮಯ್ಯ ಎಂ.ಎ. ಅವರು ಮೈಸೂರು ವಿದ್ಯಾಶಾಖೆಯಿಂದ ಪ್ರಕಟವಾದುದು.

೨. ಪ್ರಮಥಾನೀಕಕಥಾರ್ಣವೇಂದು "ಹರಿದೇವಾಚಾರ್ಯನಂ" ಧೈರ್ಯನಂ
ಸಮುದಂಚದ್ವೃಷಭಸ್ತವಾಮರ ಮಹೀಜಾರಾಮನಂ ಸೋಮನಂ |
ವಿಮಲ ಜ್ಞಾನ ಸುದೀಪಿಕಾಸ್ಫುರಿತಚೇತಸ್ಸದ್ಮನಂ ಪದ್ಮನಂ
ಕ್ರಮದಿಂ ಬಲಗೊಂಡು ಪೇಟ್ಟೆನೊಸೆದಾನೀಕಾವ್ಯಮಂ ಸೇವ್ಯಮಂ ||೯||

Edited by Shree R. Shama-Sastry, B. A., M. R. A. S. University of Mysore, 1921.

"ನೃಸಿಂಹ ಬಲ್ಲಾಳನೆಂದರೆ ೧ನೆಯ ನರಸಿಂಹನಲ್ಲವೆಂದೂ, ಹಾಗೂ ಒಂದನೆಯ ನರಸಿಂಹನ ಮಗನಾದ ೨ನೆಯ ಬಲ್ಲಾಳನಾಗಿದ್ದನೆಂದು ಹೇಳುವುದು ಯಥಾರ್ಥವಾಗಿದೆ. ಹರಿಹರದೇವನು ದೋರಸಮುದ್ರದ ೨ನೆಯ ಬಲ್ಲಾಳ ರಾಜನ ಕಾಲದಲ್ಲಿ [ಕಿ. ಶ. ೧೧೭೩–೧೨೨೦] ಅರ್ಥಾಥ್ ಕ್ರಿ. ಶ. ೧೨೧೬ರಲ್ಲಿ ಇದ್ದನೆಂಬುದು ಸಿದ್ಧ''ವೆಂದು ಪ್ರಸಿದ್ಧ ಇತಿಹಾಸ ಸಂಶೋಧಿಕರಾದ ಶ್ರೀ ನಾ. ಶ್ರೀ. ರಾಜಪುರೋಹಿತರು ಹೇಳಿದ್ದಾರೆ.[೧]

ಇವೇ ಮೊದಲಾದ ರೀತಿಯಲ್ಲಿ ಹರೀಶ್ವರನ ಕಾಲ ನಿರ್ಣಯದ ಬಗ್ಗೆ ಕಳೆದ ಮುಕ್ಕಾಲು ಶತಮಾನದಿಂದ ಸ್ವದೇಶ ಪರದೇಶದ ಪಂಡಿತರು ಅನುಮಾನ ಸಮಾಧಾನ ತರ್ಕ ಊಹೆಗಳಿಂದ ತಮ್ಮ ತಮ್ಮ ಪರಿಶೋಧನೆಯ ಫಲಿತಾಂಶ ವನ್ನು ಕಾಲಕಾಲಕ್ಕೆ ಕನ್ನಡಿಗರ ಮುಂದೆ ಇಡುತ್ತ ಮುಂದಿನವರಿಗೆ ಮಾರ್ಗ ದರ್ಶನವಿತ್ತು ಬಹುಬಗೆಯಿಂದ ಉಪಕಾರಮಾಡಿದ್ದಾರೆ. ಹರೀಶ್ವರನ ಗಿರಿಜಾ ಕಲ್ಯಾಣ ಪಂಪಾಶತಕಗಳ ಹೊರತು ಅವನ ಬೇರೆ ಇನ್ನಾವ ಕೃತಿಗಳು ಬೆಳಕಿಗೆ ಬಾರದಿದ್ದಾಗ ಗ್ರಂಥಸ್ಥವಾಗಿಯೂ ಶಾಸನರೂಪದಲ್ಲಿ ಬರುವ ಅಂತರ್‌ಬಾಹ್ಯ ಪ್ರಮಾಣಗಳನ್ನು ತರ್ಕಶುದ್ಧವಾಗಿ ವಿವೇಚಿಸುತ್ತಾ ಕಾಲದ ಬಗ್ಗೆ ಕೆಲವು ನಿರ್ಣಯಗಳನ್ನು ಕೈಕೊಂಡವುಗಳಾಗಿರುತ್ತವೆ. ಪ್ರೊ ಟಿ. ಎಸ್. ವೆಂಕಣ್ಣನವರು ಸಂಪಾದಿಸಿದ "ಬಸವರಾಜದೇವರಗಳೆ," ಶ್ರಿ ಚನ್ನಮಲ್ಲಿಕಾರ್ಜುನವರು ಸಂಪಾದಿಸಿದ "ಮಹಾದೇವಿಯಕ್ಕನ ರಗಳೆ" ರಾವಬಹದ್ದೂರ ಪಿ. ಜಿ. ಹಳಕಟ್ಟಿಯವರು ಈಗಾಗಲೇ ಪ್ರಕಟಿಸಿರುವ "ಹರಿಹರದೇವನ ರಗಳೆಗಳ'' ಏಳು ಸಂಪುಟಗಳು ಬೆಳಕಿಗೆ ಬಂದಮೇಲೆ ಈ ಕೃತಿಗಳಲ್ಲಿ ಹರೀಶ್ವರನ ಮನೋವೃತ್ತಿಯ ಪ್ರಯೋಗ ಗಳನ್ನು ಪರಿಶೀಲಿಸಿದರೆ, ಬಸವಣ್ಣನವರ ಕಾಲದಲ್ಲಿಯೇ ಅತಿ ಚಿಕ್ಕವನಾಗಿರ ಬಹುದೆ? ಅವರ ಕ್ರಾಂತಿಯ ಕೂಗು ಕೊನೆಗೊಳ್ಳದೇ ಇದ್ದಾಗ ಮುಂದಾಳಾಗಿರ ಬಹುದೇ? ಎಂಬ ಸಮಸ್ಯೆಗಳಿಗೆ ಸಮಾಧಾನಕರವಾದ ಉತ್ತರ ಬೇಕೇಬೇಕು.

" ಈ ಹೊಸ ಕವಿತಾಭಾವನೆಗೆ ಉದ್ಗಮಹೇತುವಾವುದು ? ಕರ್ನಾಟಕ ಭೂಮಿಯಲ್ಲಿ ಅಂಕುರಿಸಿದ ಶ್ರೀ ಬಸವಾದಿ ಪ್ರಮಥರ ಧರ್ಮತಾತ್ವಿಕವು.

---

೧. ಹರಿಹರದೇವ ಪುಟ ೭೩.

ಹರಿದೇವನು ಈ ಧರ್ಮವನ್ನೂ ಅದರ ತಾತ್ತ್ವಿಕಗಳನ್ನೂ ಎದೆಯಲ್ಲಿ ಮಡಗಿ ನಡೆದು ಜಗತ್ತಿಗೆ ಅದರ ಕಹಳೆಯನ್ನೂದಿದನು. ಬಸವನ ತತ್ತ್ವಗಳಿಗೆ ತಲೆದೂಗಿ ಬರಿಗೆ ನಿಂತು ಬಣ್ಣಿಸಿದವನಲ್ಲ. ಲಿಂಗವಂತನೆ ಅವನು ಎಂಬುದನ್ನು ಈ ವಿಮರ್ಶದಿಂದ ತೋರಿಸಿದೆನೆಂದು ಮತ್ತೊಮ್ಮೆ ಹೇಳದೆ ಇರಲಾರೆನು. ವೀರಶೈವರಲ್ಲಿ ಮುಖ್ಯಾಂಶವೆಂದರೆ ಭಕ್ತರಲ್ಲಿ ಜಾತಿಭೇದವಿಲ್ಲ, ಎಲ್ಲ ಕಾಯಕಗಳು ಶಿವನ ಸೇವೆ, ನಮ್ಮ ಬಾಳು ಶಿವನೊಡನೆ ಸಮರಸ; ಈ ಮೂರನ್ನು ನಾವು ಹರಿಹರದೇವನ ಕಾವ್ಯದಲ್ಲಿ ಕಾಣುತ್ತೇವೆ. ಅದನ್ನವನು ತನ್ನ ಜೀವಿತದ ತಿರುಳನ್ನಾಗಿರಿಸಿರುವನು. ಅವನು ಲಿಂಗವಂತ, ಇನಿತಕ್ಕೆ ನಿಲ್ಲಿಸಲು ಅವನೊಬ್ಬ ಮಹಾಕವಿ ಎಂಬುದನಿತಲ್ಲ ಮಹಾಕವಿವಂಶ ಪಿತಾಮಹನು.''೧

ಎಂದು ೨೦ನೆಯ ಶತಮಾನದ ಕನ್ನಡ ನಾಡಿನ ಹಿರಿಯ ವಿದ್ವಾಂಸರಲ್ಲಿ ಅಗ್ರಗಣ್ಯರೂ, ಅಸಾಧಾರಣ ಪಾಂಡಿತ್ಯ ಪ್ರತಿಭಾ ಸಂಪನ್ನರೂ ಪ್ರತ್ಯುತ್ಪನ್ನ ಮತಿಗಳೂ, ಅನುಪಮ ಧರ್ಮತತ್ತ್ವ ನೈತಿಕಾಚರಣೆಗಳಲ್ಲಿ ಬಲ್ಲಿದರೂ, ಗುರು ರುದ್ರ ಪಶುಪತಿ ಕರಕಂಜಸಂಜಾತರೂ, ಶ್ರೀ ಬಸವತತ್ವ ರಕ್ಷಣೆಯ ದಂಡಾಧೀಶರೂ ಆದ ಪೂಜ್ಯ ಸಿದ್ಧರಾಮಪ್ಪ ದುಂಡಪ್ಪ ಪಾವಟೆ, ಬಿ. ಎ. ಎಲ್‌ಎಲ್. ಬಿ. ಹೈಕೋರ್ಟ ವಕೀಲ ಹುಬ್ಬಳ್ಳಿ ಅವರು ಹಂಪೆಯ ಹರೀಶ್ವರನನ್ನು ಕುರಿತು ಬಗೆದುಂಬಿ ಭಾವಿಸಿ, ನಡೆದುಂಬಿ ಆಚರಿಸಿ, ನಾಲಿಗೆದುಂಬಿ ಹಾಡಿದ್ದಾರೆ.

ಬಾಗಿಲುಕೋಟೆ ಬಸವೇಶ್ವರ ಕಾಲೇಜ ಪ್ರಿನ್ಸಿಪಾಲರೂ, ಗಿರಿಜಾ ಕಲ್ಯಾಣದ ಸಂಪಾದಕರೂ, ಶೈವಾಗಮಸಿದ್ಧರೂ, ವೀರಶೈವ ವಾಙ್ಮಯದಲ್ಲಿ ಸುಪ್ರಸಿದ್ಧ ಪಂಡಿತರೂ ಆದ ಡಾ. ಶಿವಲಿಂಗಯ್ಯ ಚನ್ನಬಸವಯ್ಯ ನಂದೀಮಠ ಎಂ. ಎ., ಪಿಎಚ್. ಡಿ. (ಲಂಡನ್) ಅವರು "ಹರಿಹರನ ಕಾಲವನ್ನು ಬಸವಣ್ಣನವರ ( ಕ್ರಿ. ಶ. ೧೧೬೦ ) ಈಚೆಗೆ ಮತ್ತು ಸೂಕ್ತಿಸುಧಾರ್ಣವದ ಕರ್ತೃ ಮಲ್ಲಿಕಾರ್ಜುನನ (ಕ್ರಿ. ಶ. ೧೨೪೫) ಆಚೆಗೆ ಇಟ್ಟುಕೊಳ್ಳಬಹುದು" ಎಂದು ಸಂದೇಹಕ್ಕೆ ಎಡೆ ಇಲ್ಲದಂತೆ ಬಹು ಸಾರವತ್ತಾಗಿ ಅಭಿಪ್ರಾಯ ಕೊಟ್ಟಿದ್ದಾರೆ.೨

---

೧. ಹರಿಹರದೇವ ಪುಟ ೧೨೫-೧೨೬. ಶ್ರೀ ಪಾವಟೆ ಸಿದ್ಧರಾಮಪ್ಪನವರ ಲೇಖನ.

೨. ಹರಿಹರದೇವ ಗ್ರಂಥದ ಮುನ್ನುಡಿ ದಿನಾಂಕ ೬—೮—೧೯೪೭.

ಶ್ರೀಮಾನ್ ಪಾವಟೆ ವಕೀಲರು ಪಡುವ ತಾತ್ತ್ವಿಕ ಅಭಿಪ್ರಾಯವನ್ನು ಆಧಾರವಾಗಿಟ್ಟುಕೊಂಡು ಪ್ರೊ. ಬಸವನಾಳರವರ ಐತಿಹಾಸಿಕ ವಿವೇಚನಾ ಪದ್ಧತಿಯನ್ನು ಪೋಷಕವಾಗಿಟ್ಟುಕೊಂಡರೆ ರಾಷ್ಟ್ರಕವಿ ಶ್ರೀ ಮಂಜೇಶ್ವರದ ಗೋವಿಂದ ಪೈಗಳು, ಡಾಕ್ಟರ ನಂದೀಮಠರವರು, ಪ್ರೊ. ಕುಂದಣಗಾರ ಅವರು ಪ್ರೊ. ಮಾಳವಾಡರವರು, ಪ್ರೊ. ಡಿ. ಎಲ್. ನರಸಿಂಹಾಚಾರ್ಯರು, ಶ್ರೀ ರಾಜಪುರೋಹಿತರು, ಪೂಜ್ಯ ಶ್ರೀ ಪುರಾಣಿಕ ಬುದ್ಧಯ್ಯ ಸ್ವಾಮಿಗಳವರು ಹರೀಶ್ವರನ ಕಾಲಮಾನವಿಚಾರದಲ್ಲಿ ಇವರೆಲ್ಲರ ಅಭಿಪ್ರಾಯಗಳು ಹೆಚ್ಚು ವ್ಯತ್ಯಾಸವಾಗದೆ ಒಂದು ನಿರ್ಣಯಕ್ಕೆ ಬರಬಹುದೆಂದು ತೋರುತ್ತದೆ.

ಕೊನೆಯದಾಗಿ ಹರಿಹರನು ಬಸವಣ್ಣನವರೇ ಮೊದಲಾದ ಶರಣರಿಗಿಂತ ಚಿಕ್ಕವನಾಗಿದ್ದು, ಎಳೆಯತನದಲ್ಲಿಯೇ ಅವರನ್ನು ಕಂಡು ಆವರ ಭಕ್ತಿಯ ಪ್ರಭಾವಕ್ಕೆ ಒಳಗಾಗಿ, ಅವರ ಕ್ರಾಂತಿಯ ಕೂಗು ಕೊನೆಗೊಳ್ಳದೆಯಿದ್ದಾಗಲೇ 'ಕರ್ನಾಟಕ ಕಾವ್ಯಲಕ್ಷಣ ದೀಕ್ಷಾಚಾರ್ಯ'ನಾಗಿ ಸಾಹಿತ್ಯರೂಪದಲ್ಲಿ ಅದನ್ನು ಶಾಶ್ವತವಾಗಿ ಮುಂದುವರಿಸಿ ಶೈವಮತಾವಲಂಬಿಯಾದ ವೀರಬಲ್ಲಾಳನ ಕಾಲ ದಲ್ಲಿ( ಕ್ರಿ. ಶ. ೧೧೭೩–೧೨೨೦ ) ಬಾಳಿ, ಕ್ರಿ. ಶ. ೧೨೨೫ರಲ್ಲಿ ಶ್ರೀ ಪಂಪಾ ವಿರೂಪಾಕ್ಷನಲ್ಲಿ ಲಿಂಗೈಕ್ಯನಾದನೆಂದು ಸ್ಪಷ್ಟವಾಗಿ ನಿರ್ಣಯಿಸಬಹುದು.

## ಕಥಾ ಸಾರಾಂಶ

ಕಾಶ್ಮೀರದ ಪ್ರಸಿದ್ಧ ಶೈವಕವಿಯಾದ ಮಲ್ಹಣನ ಚರಿತ್ರೆಯನ್ನು ಕುರಿತು, ನಮ್ಮ ಹಂಪೆಯ ಹರೀಶ್ವರನೇ ಕನ್ನಡದಲ್ಲಿ ಮೊಟ್ಟಮೊದಲಿಗೆ ಕಾವ್ಯವನ್ನು ಬರೆದಿರುವನು ಎಂದು ಇದುವರೆಗೆಮಾಡಿದ ಶೋಧನೆಯಿಂದ ತಿಳಿದುಬಂದಿದೆ. ಆ ದೇಶದಲ್ಲಿ ಭಾರತೀ ಪೀಠವೆಂಬ ಪಟ್ಟಣವನ್ನು ಪ್ರವರಸೇನ ರಾಜನು ಆಳುತ್ತಿದ್ದನು. ಧನಿಕನಾದ ಸುವರ್ಣಭಟ್ಟನು ರಾಜನ ಸ್ನೇಹಿತನಾಗಿದ್ದನು. ಅವನಿಗೆ ಮಲ್ಹಣನೆಂಬ ಮಗನಿದ್ದನು. ಮಲುಹಣನು ವಿದ್ಯಾ ಹಾಗೂ ಧಾರ್ಮಿಕ ಸಂಸ್ಕಾರಗಳನ್ನು ಪಡೆದು ಪ್ರಾಪ್ತವಯಸ್ಕನಾಗಲು; ಮಗನ ವ್ಯಾಮೋಹ ದಿಂದ ಚಿಂತಿಸುತ್ತ ನಿತ್ಯವೂ ಒಂದು ಸಾವಿರ ಹೊನ್ನು ವೆಚ್ಚ ಮಾಡಿದರೂ ಎಂದಿಗೂ ಕೊರತೆಯುಂಟಾಗಬಾರದೆಂದು ಮೂರುಕೋಟಿ ಅರವತ್ತುಲಕ್ಷ

ಹೊನ್ನನ್ನು ಮಗನಿಗೆ ತೆಗೆದಿಟ್ಟನು. ಒಂಡೆರಡು ವರ್ಷದಲ್ಲಿ ಸುವರ್ಣಭಟ್ಟನು ದೈವಾಧೀನನಾದನು. ಮಲುಹಣನಿಗೆ ಯೌವನ ಪ್ರಾಪ್ತಿಯಾಯಿತು.

ಶ್ರೀ ವಿಜಯೇಶ್ವರದೇವರ ದಾಸಿಯಾದ ಪದ್ಮಾವತಿಯ ಮಗಳು ಮಲ್ಹಣಿ ಪ್ರಾಪ್ತವಯಸ್ಕಳಾಗಿ ಸರ್ವಾಲಂಕಾರ ಭೂಷಿತಳಾಗಿ ವಸಂತಮಾಸದಲ್ಲಿ ತಮ್ಮ ಕುಲಪದ್ಧತಿಯನುಸಾರ ದೇವಾಲಯಕ್ಕೆ ಬಂದು ನರ್ತನ ಸಂಗೀತ ಸೇವೆಯಲ್ಲಿರಲು; ಮಲುಹಣನು ತನ್ನ ಗೆಳೆಯರೊಂದಿಗೆ ದೇವಾಲಯಕ್ಕೆ ಬರುವನು. ನರ್ತನಮಾಡುವ ಮಲುಹಣಿ ಝೋಂಕನೆ ನೋಡಿ ಮಲುಹಣನಿಗಾಗಿ ಮನಸೋಲುವಳು ಅದನ್ನು ಕಂಡು ಪದ್ಮಾವತಿ ಒಪ್ಪುವಳು. ಹತ್ತುವರ್ಷಗಳು ಸುಖವಾಗಿ ಗತಿಸುವವು. ಆದರೆ ನೂರುವರ್ಷಕ್ಕೆಂದು ತಂದೆ ಮಾಡಿದ ಧನ ತೀರಿಹೋಗಲು ಮನಸ್ಸು ತೀರಲಿಲ್ಲ. ತಾಯಿ ರಕ್ಕಸಿಯಂತೆ ಮಲುಹಣನನ್ನು ಹೊರಹೊರಡಿಸುವಳು ಆದರೆ ಮಲುಹಣನಿಗೆ ವಿರಹದ ನವಮಾವಸ್ಥೆ ಮೀರಿ ಹೋಗಿ ದಿಕ್ಕುತಪ್ಪಿ ಮತ್ತೆ ಮನೆಯ ಬಳಿಗೆ ಬರುವನು. ರಾತ್ರಿ ಮಲುಹಣಿದೇವಿ ಊಟಮಾಡಿದ ಎಂಜಲನ್ನು ಒಬ್ಬ ಸೇವಿಕೆಯು ಚಲ್ಲಲು ಅವನ ಮೇಲೆ ಬೀಳುವದು. ಹಾ ! ಮಲುಹಣಿ ಎನ್ನುವನು. ಬಾಗಿಲು ಮುಚ್ಚುವರು. ಹಿಮ ಸುರಿಯುವುದು. ಬೆಳಗಾಗೆ "ಮಲುಹಣಿ'' ಆಶ್ಚರ್ಯಚಕಿತಳಾಗಿ ನೋಡುವಳು "ಎನ್ನಮೇಲೆ ಇಡುವ ಪ್ರೇಮುವನ್ನು ಶಿವನಮೇಲಿಟ್ಟು ದುಃಖವನ್ನು ನೀಗು" ಎಂದು ಬೋಧಿಸುವಳು. ಅದರಂತೆ ವಿರಹಸ್ತೋತ್ರಮಾಡಲು ಶಂಕರನು ಪ್ರತ್ಯಕ್ಷನಾಗಿ "ಮೆಚ್ಚಿದೆನು ಬೇಕಾದುದ ಬೇಡೆನಲು, "ಚಚ್ಚರದಿ ಮಲುಹಣಿಯ ಕೊಡು'' ಎನ್ನುವನು. ಕೊಟ್ಟೆನು ಮತ್ತೆ ಬೇಡೆನಲು, ನೂರುವರ್ಷದವರೆಗೆ ಸುಖವಾಗಿದ್ದು ಅವಳೊಂದಿಗೆ ಕೈಲಾಸಕ್ಕೆ ಬರುವ ವರವನ್ನು ಕರುಣಿಸು'' ಎನ್ನುವನು. ಹಾಗೇ ಆಗಲಿ ಎಂದು ವರಪ್ರದಾನ ಮಾಡುವನು. ಮಲುಹಣನ ಜೀವನ ಪರಿವರ್ತನೆಗೊಳ್ಳುವುದು. ನೂರುವರ್ಷ ತುಂಬಲು, ಕೈಲಾಸಕ್ಕೆ ಹೋಗುವರು. ಅಲ್ಲಿ ಮಲುಹಣ ಮಲುಹಣಿಯರ ಪರಿಚಯುವನ್ನು ಪಾರ್ವತಿಗೆ, ನಂದೀಶ್ವರನಿಗೆ ಬಹು ರಮ್ಯವಾಗಿ ಶಂಕರನು ಮಾಡಿಕೊಡುವನು. ಮಲುಹಣನಿಗೆ ಗಣಪದವಿ, ಮಲುಹಣಿಗೆ ರುದ್ರಕನ್ನಿಕೆಯ ಪದವಿಯನ್ನು ಪಂಪಾವಿರೂಪಾಕ್ಷನು ಕರುಣಿಸುವನು. ಅವರೀಗಲೂ ಕೈಲಾಸದಲ್ಲಿಯೂ ಸಹ ಸುಖವಾಗಿದ್ದಾರೆ. ಮುಖ್ಯವಾಗಿ ಮಮತೆಯಂದ ಈ ಕಾವ್ಯವನ್ನು ಓದಿ ಹರೀಶ್ವರನ ಪ್ರತಿಭೆಯನ್ನು ವಾಚಕರು ಗ್ರಹಿಸಬೇಕಾಗಿ ಕೋರುತ್ತೇವೆ.

# ಕೊನೆಯ ಮಾತು

ಇಪ್ಪತ್ತು ವರ್ಷಗಳ ಕಾಲ ಪ್ರಕಟನೆಯಾಗದೆ ಉಳಿದ ಈ ಗ್ರಂಥಕ್ಕೆ ಪ್ರಸ್ತಾವನೆಯ ಆರಂಭದಲ್ಲಿ ನಿವೇದಿಸಿಕೊಂಡಂತೆ ಇಂದು ರಾಜಯೋಗ ಬಂದಿದೆ. ಸತ್ಯಪ್ರೇಮ ಸೇವೆ, ಸ್ವಾರ್ಥತ್ಯಾಗದ ಆದರ್ಶವಾಗಿ ಲೇಸೆನಿಸಿಕೊಂಡು ಬಾಳಿದ, ನಮ್ಮ ಹೆಮ್ಮೆಯ ಪೂಜ್ಯ ಪ್ರೊಫೆಸರ್ ಬಸವನಾಳ ಶಿವಲಿಂಗಪ್ಪನವರ ಅಮೃತ ಶಿಲಾಪುತ್ಥಳಿಯ ಅನಾವರಣ ಮಹೋತ್ಸವ ಹಾಗೂ—"ಬಸವನಾಳ ಸ್ಮಾರಕ ಸಂಪುಟದ" ಪ್ರಕಟನೋತ್ಸವ ನೆರವೇಸಲು ಹಾಗೂ ಅವರ ಸ್ಫೂರ್ತಿಯ ಸೆಲೆ, ಸೇವೆಯ ಫಲವಾದ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಸಾಹಿತ್ಯ ಸಮಿತಿ ಬೆಳ್ಳಿಯ ಹಬ್ಬದ ಸಮಾರಂಭದ ಅಧ್ಯಕ್ಷತೆ ವಹಿಸಲು ದಿ. ೨೬–೧೦–೧೯೫೬ನೆಯ ಶುಕ್ರವಾರ ಹಗಲು ೧೮–೩೦ ಗಂಟೆಗೆ, ಕರ್ನಾಟಕರತ್ನ ಸಿಂಹಾಸನಾಧಿಪತಿಗಳೂ, ಮೈಸೂರು ರಾಜಪ್ರಮುಖರೂ ಆದ ಶ್ರೀಮನ್ ಮಹಾರಾಜ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ, ಜಿ.ಸಿ.ಎಸ್.ಐ.,ಜಿ.ಸಿ.ಬಿ. ಎಲ್‌ಎಲ್. ಡಿ. ಮಹಾ ಪ್ರಭುಗಳು ಧಾರವಾಡಕ್ಕೆ ಎರಡನೆಯ ಸಾರಿ ಆಗಮಿಸಿದ ರಾಜಯೋಗದ ಮುಪ್ಪುರಿಯ ಬಲಗೊಂಡು ರಸಿಕಚಕ್ರಿ ರಾಷ್ಟ್ರಕವಿ ಹಂಪೆಯ ಹರಿಹರದೇವನ ಈ ಕೃತಿಯು ಪ್ರಕಟನೆಗೊಳ್ಳುವ ಸೌಭಾಗ್ಯವೇ ನಮ್ಮ ಭಾಗ್ಯ.

ಕರ್ನಾಟಕ ವಿಶ್ವವಿದ್ಯಾಲಯದ ಉಪಕುಲಪತಿಗಳಾದ ರ್‍ಯಾಂಗಲರ್ ಶ್ರೀಮಾನ್ ಡಿ. ಸಿ. ಪಾವಟೆಯವರು ಹಾಗೂ ಅವರ ಧರ್ಮಪತ್ನಿ ಮಾತೃಶ್ರೀ ಸೌ|| ಗಿರಿಜಾದೇವಿ ಪಾವಟೆಯವರು ನಮ್ಮ ಬಿನ್ನಹಕ್ಕೆ ಮನ್ನಣೆಯಿತ್ತು ಈ ಗ್ರಂಥವನ್ನು ಮುಡುಪಾಗಿ ಅವರಿಗೆ ಅರ್ಪಿಸುವುದಕ್ಕೆ ಸದುಹೃದಯದಿಂದ ಅನುಮತಿ ಕೊಟ್ಟಿರುವದಕ್ಕಾಗಿ ಚಿರಕೃತಜ್ಞರಾಗಿದ್ದೇವೆ.

ತಾಡವೋಲೆ ಗ್ರಂಥಗಳನ್ನಿತ್ತು ಆಶೀರ್ವದಿಸಿದ ಮಹಾ ॥ ॥ ಸನ್ನಿಧಿಯವರಿಗೆ ಚಿರಋಣಿಗಳಾಗಿದ್ದೇವೆ. ಈ ಕಾರ್ಯದಲ್ಲಿ ನೆರವಾದ ಸಮಸ್ತರಿಗೆ ನಮ್ಮ ಹೃತ್ಪೂರ್ವಕ ಧನ್ಯವಾದಗಳು. ದಾನಿಗಳಾದ ಶ್ರೀ ವೀರಪ್ಪಣ್ಣಾ ಅಂಗಡಿಯವರ ಸಂಕ್ಷಿಪ್ತ ಪರಿಚಯವನ್ನು ಈ ಪುಸ್ತಕದಲ್ಲಿ ಸಮಾವೇಶಗೊಳಿಸಲು ನಮಗೆ ಆನಂದವಾಗಿದೆ.

ಧಾರವಾಡ<br>
೨೬–೧೦–೧೯೫೬

ಸೌ|| ಮಲ್ಲಾಬಾದಿ ಚೆನ್ನಬಸಮ್ಮ<br>
ಶ್ರೀ ಮಲ್ಲಾಬಾದಿ ವೀರಭದ್ರಪ್ಪ

*

ಶ್ರೀಮನ್ನಿರಂಜನ ಜಗದ್ಗುರು ಎಡೆಯೂರು ತೋಂಟದ
ಸಿದ್ಧಲಿಂಗೇಶ್ವರ ಸೇವಾಧುರೀಣ " ಎಂದು ಪರಮಪೂಜ್ಯ ನವಿಲುಗುಂದ ಗವಿಮಠದ
ಅಧ್ಯಕ್ಷರೂ, ಶ್ರೀಮನ್ನಿರಂಜನ ಪ್ರಣವಸ್ವರೂಪಿಗಳೂ ಆದ ಶ್ರೀ ಬಸವಲಿಂಗ
ಮಹಾಸ್ವಾಮಿಗಳವರಿಂದ ಅನುಗ್ರಹಿಸಲ್ಪಟ್ಟ ಬಿರುದಾಂಕಿತ— 'ರಗ್‌ಬಿ'

## ಶ್ರೀ ವೀರಪ್ಪ ಲಕ್ಷ್ಮಪ್ಪ ಅಂಗಡಿ ನೀಲಗುಂದ, ಸಾ|| ಗದಗ

## ಅವರ ಸಂಕ್ಷಿಪ್ತ ಪರಿಚಯ

— ✣ —

ಈ ಗ್ರಂಥದ ಪ್ರಕಟನೆಗೆ ಧನಸಹಾಯ ಮಾಡಿದ, ನಮ್ಮ ಪ್ರೇಮದ ಬಳ್ಳಿಯ ಬಳಗದ ಪೋಷಕರಾದ ಶ್ರೀಮಾನ್ ಅಂಗಡಿ ವೀರಪ್ಪಣ್ಣನವರ ಸಂಕ್ಷಿಪ್ತ ಜೀವನ ಚರಿತ್ರೆಯನ್ನು ಬರೆಯುವುದು ನಮ್ಮ ಕರ್ತವ್ಯವಾಗಿದೆ. ಗದಗ ತಾಲೂಕು ನೀಲಗುಂದದಲ್ಲಿ ಕೃಷಿವಾಣಿಜ್ಯಕಾಯಕದಲ್ಲಿ ನಿರತರೂ, ಗುರುಲಿಂಗಜಂಗಮ ಭಕ್ತಿಸಂಪನ್ನರೂ ಆದ ಸಣ್ಣವೀರಮ್ಮ ಲಕ್ಷ್ಮಪ್ಪನವರಿಗೆ ಕ್ರಿ. ಶ. ೧೯೦೦ ರಲ್ಲಿ ಗಂಡುಮಗನಾಗಿ ಜನಿಸಿದರು. ಪ್ರಾಥಮಿಕ ವಿದ್ಯಾಭ್ಯಾಸವನ್ನು ಹಳ್ಳಿಯಲ್ಲಿ ಮುಗಿಸದೆ ೧೯೧೬ರಲ್ಲಿ ಗದುಗಿಗೆ ಧಾವಿಸಿ ಬಂದು ಪ್ರಸಿದ್ಧವರ್ತಕರಾದ ಶ್ರೀ ಬುಳ್ಳಾ ಈಶ್ವರಪ್ಪನವರಲ್ಲಿ ಕರಣಿಕರಾಗಿ ನಿಂತರು. ಅವರ ಸಾಹಸವನ್ನು ಕಂಡು ೧೯೧೭ರಲ್ಲಿ ಪೆಟ್ರೋಲ್ ರವಾನೆಮಾಡುವನಿಮಿತ್ಯ ಅವರನ್ನು ಮದ್ರಾಸಿಗೆ ಕಳಿಸಿಕೊಟ್ಟರು. ಅಲ್ಲಿ ಅವಕಾಶ ಸಿಕ್ಕಾಗಲೆಲ್ಲಾ 'ಮೋಟಾರಮೆಕಾನಿಕ್' ಕೆಲಸ ಕಲಿತು ಎರಡು ವರ್ಷದಲ್ಲಿ ಮರಳಿ ಬಂದರು.

ಗುಲಬುರ್ಗಾ ರಾಯಚೂರ ಭಾಗದಲ್ಲಿ ಮೋಟಾರು ಸಾರಿಗೆ ನೆಡೆಸಲು ಹೈದರಾಬಾದ ನಿಜಾಮರಿಂದ ಒಟ್ಟುಗುತ್ತಿಗೆ ಪಡೆದ ಶ್ರೀ ಭೂಮರೆಡ್ಡಿ ಬಸಪ್ಪ ನವರ ಮೋಟಾರ್ ಮೊದಲನೆಯ ಸಾರಥಿಯಾಗಿ ೧೯೨೧–೨೨ ರಲ್ಲಿ ಕಲ್ಯಾಣ ಪ್ರಾಂತಕ್ಕೆ ಹೋದರು. ಎಲ್ಲಾ ಹೊಸಜಗತ್ತು, ಸಾಹಸಪ್ರಿಯರಾದ ವೀರಪ್ಪಣ್ಣ ನವರಿಗೆ ಬಹು ಮೋಜಾಗಿ ನಡೆಯಿತು. ಕಲ್ಯಾಣದ ಶ್ರೀ ಪ್ರಭುದೇವರ ಮಠದಲ್ಲಿ ಶ್ರೀ ಬಸವಪುರಾಣ ಖಾಂಡಸಮಾಪ್ತಿಕಾಲಕ್ಕೆ ಜಾಗ್ರತವಾದ ಧರ್ಮ

ಭಾವನೆ; ಕಲ್ಬುರ್ಗಿ ಶರಣಬಸವೇಶ್ವರ ಶಿಖರ ಪ್ರಕರಣದಲ್ಲಿ ೧೯೩೪ರಲ್ಲಿ ಏಕಾಂಗಿ ವೀರನಂತೆ ಹೋರಾಡಿ ತಮ್ಮ ಹೆಸರಿನ ಸಾರ್ಥಕತೆ ಮಾಡಿಕೊಂಡರು. ಅಲ್ಲಿಂದ ಬಂದು ಶಿವಸಂಕಲ್ಪದಂತೆ ಶ್ರೀ ಹುಲಕೋಟೆಯವರ ಮನೆತನದ ಅಳಿಯಂದಿರಾಗಿ, ೧೯೩೬ರಲ್ಲಿ "Rugby" ಮೊಟಾರ್ ಏಜನ್ಸಿ ಪಡೆದರು. ಮೊಟ್ಟಮೊದಲಿಗೆ ಗದುಗಿಗೆ ಅದನ್ನು ತಂದಿದ್ದರಿಂದ ಅದೇ ಹೆಸರು ಇಂದಿಗೂ ಅನ್ವರ್ಥಕವಾಗಿ ನಿತ್ಯವ್ಯವಹಾರದಲ್ಲಿ ಬಳಕೆಯಲ್ಲಿದೆ. ತನ್ಮೂಲಕ ಜಾಂನಗರದ ಶ್ರೀ ಸುತಾರಿಯಾ ಮನೆತನದ ವಾತ್ಸಲ್ಯಪೂರಿತ ಸ್ನೇಹ ಬೆಳೆಯಿತು. ಕಾಂಗ್ರೆಸ್ ಸದಸ್ಯರಾಗಿ ಕಂಕಣಕಟ್ಟಿಕೊಂಡದ್ದರಿಂದ ೧೯೪೨ರಲ್ಲಿ ನಡೆದ 'ಚಲೇಜಾವ್' ಚಳವಳಿಯಲ್ಲಿ ಸರ್ದಾರ್ ವಲ್ಲಭಭಾಯಿ ಪಟೇಲ್ ಅವರ ಅತಿ ನಂಬಿಗೆಗೆ ಪಾತ್ರರಾಗಿ ಕೊನೆಗೆ ಆವರ ಖಜಾಂಚಿ (Treasurer)ಗಳಾಗಿ ಇಡೀ ರಾಷ್ಟ್ರದ ಕಾರ್ಯಕರ್ತರ ಪರಿಚಯಸ್ಥರಾದುದಲ್ಲದೆ ಮುಂಬೈ ನಗರದಲ್ಲಿ ನಾಮಾಂಕಿತ ವ್ಯಕ್ತಿಗಳಾದರು. ಅಲ್ಲಿ ಆಗಲೇ ಧರ್ಮಪ್ರಕಾಶ ಶ್ರೀ ಚಿಗಟೇರಿ ಮುರಿಗೆಪ್ಪನವರ ಒಡನಾಟ ಊಟಉಪಚಾರದಲ್ಲಿ ಹೆಚ್ಚಾಗಿ ಅವರ ವ್ಯಕ್ತಿತ್ವದ ಪ್ರಭಾವಮುದ್ರೆ ಅಚ್ಚೊತ್ತಿದಂತೆ ಆಯಿತು. ಅಂದಿನಿಂದ ಪ್ರಸಂಗವಿಶೇಷಗಳಲ್ಲಿ ಶ್ರೀ ಚಿಗಟೇರಿ ಮುರಿಗೆಪ್ಪನವರ ಆದರ್ಶ ಎಲ್ಲರಿಗೂಬೇಕೆಂದು ಸೊಲ್ಲುಸೊಲ್ಲಿಗೆ ಹೇಳುತ್ತಿರುವರು.

ಒಬ್ಬ ಹೆಣ್ಣುಮಗಳನ್ನು ಒಂದು ಗಂಡು ಕೂಸನ್ನು ಪಡೆದರು. ಮಗಳಿಗೆ ಬಸವಣ್ಣೆವ್ವನೆಂದೂ, ಮಗನಿಗೆ ಶರಣಬಸಪ್ಪನೆಂಬ ಶುಭನಾಮವನ್ನಿಟ್ಟರು. ಮೋಟಾರು,ಪೆಟ್ರೋಲ ವ್ಯಾಪಾರದಲ್ಲಿ(Expert)ಪರಿಣಿತರಾದರು. ಲಕ್ಷಾಂತರ ಲಾಭ ನಷ್ಟಕ್ಕೆ ಗುರಿಯಾದರು—"ಅರ್ಥರೇಖೆ ಇದ್ದಲ್ಲಿ ಫಲವೇನು? ಆಯುಷ್ಯ ರೇಖೆ ಇಲ್ಲದ್ದನ್ನಕ್ಕರ?" ಎಂಬಂತೆ ಚಿಕ್ಕಂದಿನಲ್ಲಿಯೇ ಏಕಮಾತ್ರಪುತ್ರನು ಶಿವಾಧೀನನಾದನು. ಎಡರು ಬಂದು ಕವಿಯಲು ಅಂಜದಿರೆಂಬಂತೆ, ವ್ಯಾಪಾರ ಉದ್ಯೋಗದಲ್ಲಿ ಅಪಾರ ನಷ್ಟ ಸಂಭವಿಸಿದರೂ ಆತ್ಮಜನು ಅಗಲಿದರೂ ಸಹ ತಮ್ಮ ಧರ್ಮಪತ್ನಿಯರಾದ ಸೌ. ವೀರಬಸಕ್ಕನವರ ಲೌಕಿಕ ವ್ಯವಹಾರಿಕ ಜಾಣ್ಮೆಯ ಫಲವಾಗಿ ಅಂಜದೆ ಅಳುಕದೆ ಬಂದ ಬಹು ಚಿಂತೆಯಿಲ್ಲಿ ಧೈರ್ಯವನ್ನು ತಾಳಿಕೊಂಡು ಇದ್ದುದ ವಂಚನೆ ಮಾಡದೆ, ಇಲ್ಲದುದ ಕಡವ ಮಾಡದೆ ಶರಣರ ಬಾಳನ್ನು ಬಾಳುತ್ತಿರುವರು. ರಸ್ತೆ ಸರಿಮಾಡಿಸುವುದು, ಭಾವಿ ತೆಗೆಸುವುದು, ಶಾಲಾ ಕಟ್ಟಡಗಳನ್ನು ಕಟ್ಟಿಸುವ ಗುತ್ತಿಗೆಯ ಹೊಸ ಕಾಯಕ ಆರಂಭಿಸಿದರು.

ಹುಬ್ಬಳ್ಳಿ ತಾಲೂಕ ಶಿರಗುಪ್ಪಿ ಶ್ರೀ ವಾಲಿಶೆಟ್ರ ಮಹಾಬಳೇಶ್ವರಪ್ಪನವರಿಗೆ ಮಗಳನ್ನು ಕೊಟ್ಟು ಅವರ ಕಲ್ಯಾಣ ಮಾಡಿ ತಮ್ಮೊಡನೆ ವ್ಯವಹಾರಕ್ಕೆ ಪೋಷಕವಾಗಿ ಮಾಡಿಕೊಂಡಿರುವರು.

ಕ್ರಿ. ಶ. ೧೯೫೦ರಲ್ಲಿ ಶ್ರೀ ವೀರಪ್ಪಣ್ಣನವರ ಜೀವನದ ಭವ್ಯ ಪರಿವರ್ತನ ಕಾಲ. ಶ್ರೀ ಬಸವಣ್ಣೆಪ್ಪಾ ದಾನಪ್ಪಾ ಬುರ್ಜಿಯವರು ಶ್ರೀಕ್ಷೇತ್ರ ಯಡೆಯೂರು ಸಿದ್ಧಲಿಂಗೇಶ್ವರ ಶಿವಯೋಗಿಗಳ ದರ್ಶನಕ್ಕೆ ಹೋಗಬೇಕಾಯಿತು. ಅವರ ಮೋಟಾರು ಸಾರಥಿಯಾಗಿ ಅಲ್ಲಿಗೆ ಸುಖರೂಪದಲ್ಲಿ ಹೋಗಿ ತಲುಪಿ ಮಹಾ ಶಿವಯೋಗಿ ಪಾದವ ಕಂಡ ಕ್ಷಣವೇ ಭಾವಪರಿಪಕ್ವದ ಫಲವಾಗಿ ಪರಿವರ್ತನ ಗೊಂಡರು. ರಾವ್‌ಸಾಹೇಬ ನಾಗಪ್ಪಣ್ಣ ಇನಾಮತಿಯವರೊಂದಿಗೆ ಆ ಕ್ಷೇತ್ರದ ಜೀರ್ಣೋದ್ಧಾರ ಕಾರ್ಯದ ಸೇವೆಯಲ್ಲಿ ಕಂಕಣಬದ್ಧರಾದುದಲ್ಲದೆ ಶ್ರೀ ನಿರಕ್ಷರ ಬೋಳಬಸವೇಶ್ವರ ಸ್ವಾಮಿಗಳಿಗೆ ನೂರೊಂದುಸ್ಥಲಗಳನ್ನು ಶ್ರೀ ಜಗದ್ಗುರು ತೋಂಟದಾರ್ಯರು ಬೋಧಿಸಿದ, ನದೀ ನೀರಿನಲ್ಲಿ ಮುಳುಗಿ ಹೋದ ನಂದೀಶ್ವರ ಕಲ್ಲು ಮಂಟಪವನ್ನು ನೀರು ಬತ್ತಿದ ಮೇಲೆ ಸಾಹಸದಿಂದ ಹೊರಕ್ಕೆ ತಂದು ಪುನರುಜ್ಜೀವನಗೊಳಿಸಿರುವರು. ಗದುಗಿನಲ್ಲಿ ಹೊಸ ಮನೆ ಕಟ್ಟಿ ಅದಕ್ಕೆ "ಶ್ರೀ ಸಿದ್ಧಲಿಂಗನಿಲಯ"ವೆಂದು ಹೆಸರಿಟ್ಟು, ಅರಭಾವಿ ಪುಣ್ಯಾರಣ್ಯದ ಮಹಾತಪಸ್ವಿಗಳಾದ ಶ್ರೀಮನ್ನವಮ ದುರುದುಂಡೀಶ್ವರ ಮಹಾಂತ ಶಿವಯೋಗಿ ಗಳವರನ್ನು ಅಲ್ಲಿಗೆ ಬಿಜಯಂಗೈಸಿಕೊಂಡು ಮಹಾದಾಸೋಹ ಮಾಡಿ ತಮ್ಮ ಭೃತ್ಯಾಚಾರ ವ್ಯಕ್ತಗೊಳಿಸಿದರು. ಗದುಗಿನ ಶ್ರೀ ಬುಳ್ಳಾ ಅಂದಾನೆಪ್ಪನವರ ಮಗ ಚಿ. ಹೊಳಿಯಪ್ಪನ ಲಗ್ನದ ಕಾಲದಲ್ಲಿ ಶ್ರೀ ಹಡಗಲಿಮಠದಲ್ಲಿ ನಾನು ಮಲುಹಣನಚರಿತ್ರೆ ಹೇಳಲು ಅದನ್ನು ಕೇಳಿ ಸ್ಫೂರ್ತಿಗೊಂಡು ಈ ಪ್ರಕಟನೆಗೆ ೨೫೧ ರೂಪಾಯಿ ಧನ ಸಹಾಯ ಮಾಡಿದರು. ಇಂಥವರ ಪರಿಚಯವನ್ನು ನಮ್ಮ ಪ್ರೇಮದ ಬಳ್ಳಿಯ ಬಳಗದ ಪೋಷಕರೂ ಸಾಹಿತ್ಯಕಲಾಪ್ರೇಮಿಗಳೂ ರಸಿಕರೂ ಆದ ಶ್ರೀ ಹುರಕಡ್ಲಿ ಚೆನ್ನಪ್ಪಣ್ಣನವರು ನಮಗೆ ಮಾಡಿಕೊಟ್ಟರು. ಈ ಬಗೆಯ ಭಕ್ತಿಭಾವಸಂಪನ್ನರೂ ಸಾಹಿತ್ಯಸಮಾಜ ತರುಣರ ಬಗ್ಗೆ ಅಭಿ ಮಾನಿಗಳೂ ಶಿವಾನುಭವ ಪ್ರೇಮಿಗಳೂ ಆದ ಶ್ರೀ ಅಂಗಡಿ ವೀರಪ್ಪಣ್ಣನವರಿಗೆ ಹಾಗೂ ಅವರ ಮನೆತನದವರಿಗೆ ಶ್ರೀ ಪಂಪಾಂಬಿಕೆ ವಿರೂಪಾಕ್ಷರು ಅನಂತ ಸುಖಸಂಪದವನೀಯಲೆಂದು ಭಕ್ತಿಯಿಂದ ಪ್ರಾರ್ಥಿಸುತ್ತೇವೆ.

**—ಸಂಪಾದಕರು**

# ಮಲುಹಣದೇವ ಚರಿತೆ ಸಿದ್ಧಪಡಿಸಲು ಗ್ರಂಥಪಾಠಗಳ ಸಹಾಯ

೧. **ಜ.** ಚಿತ್ರದುರ್ಗದ ಶ್ರೀ ಮಚ್ಚಿನ್ಮೂಲಾದ್ರಿ ಬೃಹನ್ಮಠ ಮಹಾಸಂಸ್ಥಾನಾಧಿಪತಿಗಳಾದ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಜಯದೇವ ಮುರಘರಾಜೇಂದ್ರ ಮಹಾಪ್ರಭುಗಳವರು ತಮ್ಮ ದಿವ್ಯಹಸ್ತದಿಂದ ನಮಗೆ ದಯಪಾಲಿಸಿದ ತಾಡಓಲೆ ಪ್ರತಿ. ಮಹಾಸನ್ನಿಧಿಯವರು ದಿನಾಂಕ ೨-೧೦-೧೯೫೬ನೆಯ ಮಂಗಳವಾರ ಬೃಹನ್ಮಠದಲ್ಲಿ ಲಿಂಗದೊಳಗಾದರು. ದಿನಾಂಕ ೩-೧೦-೫೬ ನೆಯ ಬುಧವಾರ ದಾವಣಗೆರೆ ಶ್ರೀ ಶಿವಯೋಗಾಶ್ರಮದಲ್ಲಿ ಕ್ರಿಯಾಸಮಾಧಿಸ್ತರಾದರು. ಅವರ ಶುಭಪ್ರದ ನಾಮವು ಈ ಕೃತಿಯಲ್ಲಿ ಚಿರಸ್ಮರಣೀಯವಾಗಿ ಉಳಿಯಲು "ಜ" ಸಂಕೇತವನ್ನು ಭಕ್ತಿಗೌರವ ಕೃತಜ್ಞತಾಪೂರ್ವಕ ಬಳಸಿಕೊಂಡಿದ್ದೇವೆ.

೨. **ಮ.** ಜವಳಿ ಕಾಯಕ ಜೀವಿಗಳಾದ ದಾವಣಗೆರೆ ಮಲ್ಲಾಬಾದಿ ಗುರುಶಾಂತಮ್ಮ ಮುರಿಗೆಪ್ಪನವರ ಪುತ್ರರೂ ಶಿವಾನುಭಾವಿಗಳೂ ಆದ ತಿ॥ ಮಹಾಲಿಂಗಪ್ಪನವರು ಅವರ ಧರ್ಮಪತ್ನಿ ಮಾತೃಶ್ರೀ ಗಂಗಮ್ಮನವರ ಪಿತ್ರಾರ್ಜಿತ ಸೊತ್ತು. ನಮ್ಮ ಪೂಜ್ಯ ಪಿತಾಮಹರ ಹಾಗೂ ಮಾತಾಪಿತೃಗಳ ಸವಿನೆನಹಿಗಾಗಿ ಈ ತಾಡಓಲೆ ಪ್ರತಿಗೆ "ಮ" ಸಂಕೇತವನ್ನು ಇಟ್ಟಿದ್ದೇವೆ.

೧. **ಚಿ.** ಚಿತ್ರದುರ್ಗದ ಶ್ರೀ ಜಗದ್ಗುರು ಮುರುಘರಾಜೇಂದ್ರ ಮಹಾ ಸಂಸ್ಥಾನದ "ಶಾರದಾ ಭಾಂಡಾರದಲ್ಲಿ" ದೊರೆತ "ಹರಿಹರನ ನೂರಿಪ್ಪತ್ತು ರಗಳೆ"ಗಳ ಕಟ್ಟು. ಮೇಲಿನ ಜ. ಮ. ಚಿ. ಪ್ರತಿಗಳಲ್ಲಿ ಅವುಗಳನ್ನು ಬರೆದವರ ಹೆಸರಾಗಲೀ ಮುಗಿಸಿದ ಕಾಲದ ಟಿಪ್ಪಣಿಯಾಗಲೀ ದೊರೆತಿರುವುದಿಲ್ಲ.

೪. **ಮೈ.** ಮೈಸೂರು ವಿಶ್ವವಿದ್ಯಾನಿಲಯದ Kannada Research Irstitute (ಓರಿಯಂಟಲ್ ಲೈಬ್ರರಿ) ಪ್ರತಿ No. 358 (ಕ 1—232) ಶರಣರ ರಗಳೆ ಕಟ್ಟನ್ನು, ದಿವಂಗತ ಪ್ರೊ. ಟಿ. ಎಸ್. ವೆಂಕಣ್ಣಯ್ಯ, ಎಂ. ಎ. ಅವರು "ಮ" ಪ್ರತಿಯೊಡನೆ ಹೋಲಿಸಿ ನೋಡಿ ಟಿಪ್ಪಣಿ ಗುರುತಿಸಿಕೊಟ್ಟದ್ದು.

೫. **ಹ.** ರಾವಬಹದ್ದೂರ ಫಕ್ಕೀರಪ್ಪ ಗುರುಬಸಪ್ಪ ಹಳಕಟ್ಟಿ ಬಿ. ಎ., ಎಲ್ ಎಲ್. ಬಿ. ಅವರು ೨೦-೧೦-೧೯೪೦ರಲ್ಲಿ ಸಂಪಾದಿಸಿ ಪ್ರಕಟಿಸಿದ ಹರಿಹರನ ರಗಳೆಗಳು ಭಾಗ ೭ರಲ್ಲಿ ಬರುವ ಮಲುಹಣದೇವನ ರಗಳೆಯ ಪಾಠಗಳ ಸಂಕೇತ.

---

॥ ಶ್ರೀ ಪಂಪಾ ವಿರೂಪಾಕ್ಷಲಿಂಗಾಯ ನಮಃ ॥

ರಸಿಕಚಕ್ರಿ

## ಹಂಪೆಯ ಹರಿಹರದೇವರು

ನಿರೂಪಿಸಿದ

# ಮಲುಹಣದೇವ ಚರಿತೆ

## ಮೊದಲನೆಯ ಸ್ಥಲ

ಕಂದ:

ಧಾರುಣಿಯೊಳ್ ಮಲುಹಣನಂ
ಕಾರುಣ್ಯಾಕರನುದಾರ ವಾರಿಧಿ ಮೆಱೆದಂ
ಗೌರೀಕುಚಕುಂಕುಮಲಸಿ-
ತೋರಸ್ಥಲನೆಮ್ಮ ಹಂಪೆಯ ವಿರೂಪಾಕ್ಷಂ

ಲಲಿತ ರಗಳೆ:

ಶ್ರೀ ವಸುಮತೀವದನಮುಕುರಮೆಂದೆನಿಸಿರ್ಪ
ಪಾವನಂ ಸಕಲ ದೇಶಕ್ಕೆ ತಾನೆನಿಸಿರ್ಪ |
ಶಾರದಾದೇವಿ ಪ್ರಸನ್ನೆಯಾಗಿರುತಿರ್ಪ
ಚಾರುತರ ನೂತನಕಳಾವಿದ[1]ರೊಳಿರುತಿರ್ಪ |
ಊರೂರ್ಗೆ ತೀವಿದ ತಟಾಕನಿಕರಂಗಳಿಂ
ಊರೂರ್ಗೆ ಕಿಕ್ಕಿಱಿದು ಕೊರ್ವಿದ ಬನಂಗಳಿಂ |
ಬನದೊಳಗೆ ಸುಳಿಯುತಿಹ ಕತ್ತುರಿ ಮಿಗಂಗಳಿಂ
[2]ಬಿನದದಿಂ ಪರಿತರ್ಪ[2] ಚಮರೀ ಮೃಗಂಗಳಿಂ |
ದೇವಮಾತೃಕ ನದೀಮಾತೃಕದ ಬೆಳೆಗಳಿಂ
ದೇವನದಿಯಂದದಿಂ ಪರಿವರಿವ ನದಿಗಳಿಂ | ೧೦

---

೧ ದೊ (ಮ. ಮ್ಯೆ. ಚಿ. ಹ.) ೨–೨ ಬಿನದದಿಂ ಮೆಯ್ತುರ್ಪ (ಮ್ಯೆ.) ವಿನಯದಿಂದೆ-
ಯ್ತುರ್ಪ (ಮ.)

ನಗರಿನಗರಿಯೊಳೆಸೆವ ದೇವಾಲಯಂಗಳಿಂ
ಮುಗಿಲನಳ್ಕಿಱೀವ ಘನ ವಾಟಕೂಟಂಗಳಿಂ |
ಎಸೆವ ಕಾಶ್ಮೀರದೇಶಂ ರಂಜಿಸುವುದಿಳೆಗೆ
ಪೊಸಪೊಸಬನಂ [೧]ತಟಾಕಂಗಳಿದೂರೂರ್ಗೆ[೧] |

ಬಂಧನಂ ಪೂಮಾಲೆಯೊಳಗಲ್ಲದಲ್ಲಿಲ್ಲ
ಅಂಧತ್ವವಾ ಕಟ್ತಿಲೆಯೊಳಲ್ಲದಲ್ಲಿಲ್ಲ |
ಕೊಯ್ವನುಡಿ ಕೆಯ್ಗಳೊಳ್ [೨]ಕಾಮಿನಿಯರಳಕದೊಳ್
ಬಯ್ವನುಡಿ ಗಿಳಿಗಳೊಳ್ ನಲ್ಲರೊಳ್ [೩]ಸರಸದೊಳ್ |
ಬಡತನಂ ಲತೆಗಳೊಳ್ [೪]ಲಲನೆಯರ ನಡುವಿನೊಳ್
ಕಿಡಿಸುವುದು ವಂಶಮಂ ಮೇದರೊಳ್ ವೃಷಭನೊಳ್ ೨೦
ಅವನಿಗತಿಕಂಟಕಂ ಕೇತಕೀವೃಂದದೊಳ್
ಭುವನಕಂಟಕವೆಂಬುದಂಬುಜದ ನಾಳದೊಳ್ |
ಕರಪೀಡನಂ ಸುರತಸಂಗದೊಳ್ ತರಣಿಯೊಳ್
ತಿರುಗಿ ಬರ್ಪಳಿಯಾಸೆ ನವಪುಷ್ಪ[೫] ಜಾತಿಯೊಳ್ |
ಹೆಚ್ಚು ಕುಂದೆಂಬುದಾ ಚಂದ್ರನೊಳ್ ಶರಧಿಯೊಳ್
ಹೆಚ್ಚಿರ್ದ ದಾನಾರ್ಥವೆಂಬುದಾ ತುಂಬಿಯೊಳ್ |
ಇಂತಿವಱೊಳಲ್ಲದಾ ನಾಡೊಳೆಲ್ಲೆಲ್ಲಿಯುಂ
ಸಂತತಂ ಸುಖಮಯಂ ದೇಶದೊಳಗೆಲ್ಲಿಯುಂ |

ಆ ದೇಶದೊಳ್ ರಾಜಧಾನಿಯೆನೆ [೬]ರಂಜಿಪುದು
ಭೂದೇವತೆಯ ನೊಸಲತಿಲಕಮೆನಲೊಪ್ಪುವುದು | ೩೦
ಭಾರತೀಪೀಠವೆಂಬುದು ಪಟ್ಟಣದ ನಾಮ
ಈರೇಳು [೭]ಲೋಕಕ್ಕೆ ಕೀರ್ತಿವಡೆಯಿತು ನಾಮ |
[೮]ಅಲ್ಲಿ ಶುದ್ಧ ಸ್ಫಟಿಕವೆತ್ತೆಸೆವ ಕೋಂಟೆಯಿಂ[೮]

---

೧—೧ ಪಟ್ಟಣಂಗಳಿಂದುರ್ವರೆಗೆ ( ಜ. ಚಿ. ಮ. ಮ್ಯ. ) ೨ ಮಾನಿನಿ ( ಚಿ. ಹಲ್ಲ) ೩ ಸುರುತ (ಚಿ) ೪ ವನಿತೆಯುರ (ಚಿ) ೫ ವಾಟ (ಜ) ೬ ಲೊಪ್ಪುಪುದು (ಚಿ) ೭ ಜಗಕೆ. (ಚಿ. ಹ.) ಭುಲಿನದೊಳು (ಜ) ೮-೮ ಅಲ್ಲಿ ಕತ್ತುರಿಗೆಸರೆನೆಸೆವಾಳ್ವೇರಿಯಿಂ (ಚಿ)

ಅಲ್ಲಿ ಸಸಿಕಾಂತದೆಸೆವಟ್ಟಳಿಯ ಕೋಂಟೆಯಿಂ |
ಅಲ್ಲಿ ಕತ್ತುರಿಯ ಕರ್ದಮದ ತಿಳಿವರಿಕೆಯಿಂ
ಅಲ್ಲಿ ಕಳುರುತಿಗೆಯ್ವ ಪಲವು ನೀರ್ವಕ್ಕಿಯಿಂ |
ಅಲ್ಲಿ ಮನೆಮನೆಗಳೊಳ್ ಕುಂಕುಮದ ಮಡಿಗಳಿಂ
ಅಲ್ಲಿಯುಂ ದ್ರಾಕ್ಷಾಲತಾಮಂಟಪಂಗಳಿಂ |
ಬಾಳೆ ಕಿತ್ತೀಳೆ ಹೇರೀಳೆ ದಾಳಿಂಬದಿಂ
ನಾಳಿಕೇರಂ ನವಾಮ್ರಂ ಮಾತುಳಂಗದಿಂ | ೪೦
ತಳಿರೊತ್ತಿ [೧]ರಂಜಿಸುವಶೋಕದ್ರುಮಂಗಳಿಂ
ಕಳಹಂಸಮಿಥುನದಿಂ ಬಳಸಿದ ಕೊಳಂಗಳಿಂ |
ವೇದಘೋಷಂ ಪುರಾಣ ಪ್ರಸಂಗಗಂಳಿಂ
ಆದರಿಪ ಶಿವಕಥನ ಶೈವಾಗಮಂಗಳಿಂ |
ಅಲ್ಲಲ್ಲಿ ಶಶಿಕಾಂತ[೨] ಭವನಿಕೆಗಳಿಂದೆಸೆವ
ಅಲ್ಲಲ್ಲಿ ನೆಲೆಯ ಕರುಮಾಡಂಗಳಿಂದೆಸೆವ |
ರಾಜಿಸುವ ಹೊಸ ಸೂರ್ಯಸೋಮವೀಥಿಗಳೆಸೆವ
ರಾಜಭೂಷಣನಭವನಾವಳಿಗಳಿಂದೆಸೆವ |
ಪಟ್ಟಣಮನಾಳ್ವನಪ್ರತಿಮ ಭೂಪಂ ನೋಡ
ಕಟ್ಟಧಿಕನುತ್ತಮಂ ಪ್ರವರಸೇನಂ ನೋಡ | ೫೦
ಗಜ[೩] ಘಟಾಶ್ವಾಳಿ ರಥ[೩]ನಿಕರ ಸಂಪದಕರಂ
ನಿಜಭುಜಾಗ್ರಪ್ರಯುತ ವೀರಲಕ್ಷ್ಮೀ[೪]ವರಂ |
[೫]ನವರಸಾಲಂಕಾರ[೫] ಸತ್ಕಾವ್ಯಕೋವಿದಂ
ನವಗೀತವಾದ್ಯ ನೃತ್ಯತ್ರಯ ಕಲಾವಿದಂ |
ನಿತ್ಯಸಾರಸ್ವತಂ [೬]ನಿತ್ಯಸಂಪದಕರಂ
ಸತ್ಯಸಾಹಿತ್ಯಗಂಭೀರಗುಣವಿಸ್ತರಂ |

ಆ ಪ್ರವರಸೇನರಾಜಂಗೆ ಹೊಯ್‌ಕೆಯ್ಯೆನಿಸಿ
ವಿಪ್ರನೊಪ್ಪುವನಾ ಪುರಕ್ಕೆ ಧನಪತಿಯೆನಿಸಿ

---

೧ ರಾಜಸು ( ಚಿ ) ೨ ಭವನಿಕೆ ( ಚಿ ) ೩—೩ ಘಟಾಶ್ವವರೂಥ ( ವ್ಯೆ ) ೪ ಕರಂ
೫—೫ ವಿವಿಧ ವಿದ್ಯಾಧರಂ ( ಜ. ವ್ಯೆ. ಮ. ) ೬ ಸತ್ತ್ವ (ಹ)

ತನ್ನ ಪೆಸರೊಪ್ಪುವ ಸುವರ್ಣಭಟ್ಟಂ ನೋಡ
ತನ್ನ ಸಂಪನ್ನತೆ ಕುಬೇರಂಗೆ ಸರಿನೋಡ | ೬೦
ಬಂಟರ್ಗೆ [1]ದಾಸರ್ಗೆ ಸಹಸ್ರ ಸಂಖ್ಯೆಯ ಧನಂ
ನೆಂಟರ್ಗೆ ನಲ್ಲರ್ಗೆ ಲಕ್ಷ ಸಂಖ್ಯೆಯ ಧನಂ |
ಪೊದ್ದಿದರ್ ಪೊರೆದರ್ಗೆ ಕೋಟಿ ಸಂಖ್ಯೆಯ ಧನಂ
ಸಾರ್ದ ಶಿಷ್ಯಾವಳಿಗನಂತ ಸಂಖ್ಯೆಯ ಧನಂ |
ಪೆಸರ ಛತ್ರಂ ಪೆಸರ ಪುರವರ್ಗವಲ್ಲಲ್ಲಿ
ಪೆಸರ ಕೆಱೆಯುಱವಟಿಗೆಯಾರವೆಗಳಲ್ಲಲ್ಲಿ |
ಪೆಸರಗ್ರಹಾರಂ ಶಿವಾಲಯಗಳಲ್ಲಲ್ಲಿ
ಪೆಸರ ಧರ್ಮಪ್ರಕರವೆಣಿಸಲರಿದಲ್ಲಲ್ಲಿ |

ಇಂತೆಸೆವ ವಿಪ್ರಂಗೆ ಸುತನೊರ್ವನೊಪ್ಪುವಂ
ಸಂತತಂ ಸುವರ್ಣಭಟ್ಟನ ಮನಮನಪ್ಪುವಂ | ೭೦
ಆತನ ಪೆಸರ್ ಪುರಕೆ ಮೆಱೆವ ಮಲುಹಣನೆಂದು
ಆತನ ವಿಳಾಸದೊಳ್ ಪಿತನ ಚಿತ್ತಂ ಸಂದು |
ಉಪನಯನ ವೈವಾಹಮಂ ವಿಭವದಿಂ ಮಾಡಿ
ವಿಪುಳ ವೇದಂ [2]ಸಕಳ ಶಾಸ್ತ್ರಜ್ಞರಂ ಕೂಡಿ |
ಶೈವೋಪದೇಶಮಂ ಪಿರಿಯರಿಂ ಮಾಡಿಸುತೆ
ದೈವಜ್ಞನೆನಿಪ ಮಗನಂ ನೋಡಿ ಪುಳಕಿಸುತೆ |
ದಿವ್ಯವಸ್ತ್ರಂ ಗಂಧಕಸ್ತೂರಿ ಪುತ್ರಂಗೆ
ನವ್ಯಭೂಷಣ ವಿತತಿ ವಿಸ್ತರಂ ಪುತ್ರಂಗೆ |
ಗೀತವಾದ್ಯಂ ನೃತ್ಯಲೀಲೆ ಪುತ್ರನ ಮುಂದೆ
ನೂತನ ವಿನೋದ ಸರಸೋಕ್ತಿ ಪುತ್ರನ ಮುಂದೆ | ೮೦
ನವರಸಂ ನವಫಳಂ ನವ[3]ವಿಧಂ ಪುತ್ರಂಗೆ
ನವವಾಹನಂ ನೂತ್ನರತ್ನಮುಂ ಪುತ್ರಂಗೆ |
ಇಂತು ಪುತ್ರನನೋವಿ ಕಣ್ತೀವಿ ನೋಡುತುಂ

---

೧ ಬಲ್ಲರ್ಗೆ (ಚಿ) ೨ ಶೈವ (ವೈ); ಸರಸ (ಹ) ೩ ಸುಖಂ (ವೈ)

ಸಂತತಂ ಮಲುಹಣನ ಮೋಹದೊಳ್ ನಲಿಯುತುಂ
ಚಿಂತಿಸಿದನಾತಂಗೆ ಸುಖದೊಳಿರ್ಪಂದಮಂ
ಮುಂತೆ ಮಾನಿಸರ ಹಂಗಿಲ್ಲದೊಂದಂದಮಂ |
ನಿಚ್ಚಂ ಸಹಸ್ರ [೧]ಹೊನ್ನಿನ ಲೆಕ್ಕದಿಂ ಕೂಡಿ[೧]
ಅಚ್ಚರಿ ಮಿಗಲ್ ನೂಱುವತ್ಸರಕ್ಕನುಮಾಡಿ |
ಒರ್ವಂಗೆ ಪರಮಾಯು ನೂಱು ವತ್ಸರಮೆಂದು
ಸರ್ವಧನದೊಳ್ ತೆಗೆಸಿದಂ ಮಲುಹಣಂಗೆಂದು | ೯೦
ಮೂಱು ಕೋಟಿಯ ಮೇಲೆ ಲಕ್ಕವಱುವತ್ತಾಗೆ
ಬೇಱೆ ವಿವರಿಸಿದ ಹೊನ್ನುಂ ಮಲುಹಣಂಗಾಗೆ |
ಕಟ್ಟಿ ಮುದ್ರಿಸಿದಂ ಸುವರ್ಣಭಟ್ಟಂ ನೋಡ
[೨]ಪಟ್ಟಣಕ್ಕಿಳಿಗೆ [೨]ಪುತ್ರಂಗೆ ಮಾಡಿತು ನೋಡ |

ಈ ತೆಱದೊಳರ್ಥಮಂ ಪುತ್ರಂಗೆ ಬೈಚಿಟ್ಟು
ನೂತನ ಸುಖಂಗಳಂ ಮನದೊಳಗೆ ಮುಂತಿಟ್ಟು |
ಒಂದೆರಡು ವತ್ಸರಂ ಸುಖದೊಳಿರ್ಪನಿತರ್ಕೆ
ಸಂದಣಿಪ ಹರುಷದಿಂ ಪದುಳಮಿರ್ಪನಿತರ್ಕೆ |
ಬಂದುದು ಸುವರ್ಣಭಟ್ಟಂಗೆ ಕಾಲನ ಧಾಳಿ
ನಿಂದು ಸೋಂಕಿತ್ತುಸುವನೆಯ್ದೆ ರೋಗದ ಧಾಳಿ | ೧೦೦
[೩]ಸೋಂಕಲುಗ್ರಜ್ವರದ ತಾಪದಿಂದಬ್ಬಿದಂ
ಭೋಂಕನೆ ಸುವರ್ಣಭಟ್ಟಂ ದಿವವನೈದಿದಂ |
ತಂದೆ ಸ್ವರ್ಗಕ್ಕೆ [೪]ನೆಗೆದುದನಱಿದು ಮಲುಹಣಂ
ಮುಂದುಗೆಟ್ಟಱವುಗೆಟ್ಟೞಲು[೫]ತಿರೆ ಮಲುಹಣಂ |
ಸರ್ವಸಂಭ್ರಮದಿಂದೆ ತಂದೆಯುಂ ಸಂಸ್ಕರಿಸಿ
[೬]ಸರ್ವ ಮುಖದಿಂ ಪಿಂಡಪಿತೃಕಾರ್ಯಮಂ [೭]ಕೊಡಿಸಿ |
ಸಕಳ ಭರಭಾರಕ್ಕೆ ತಾನೆ ವಲ್ಲಭನಾಗಿ
ಸಕಳ ಪರಿಜನಕೆಲ್ಲ ತಾನೆ ರಕ್ಷ ಶಿಕ್ಷಕನಾಗಿ |

---

೧-೧ ಹೊನ್ನ ಲೆಕ್ಕಮಂ ಮಾಡಿ (ಮೈ) ೨-೨ ಕಟ್ಟಳೆಯಿಂದೆಂದು (ಚಿ) ೩ ಸೋಂಕಿತು (ಮ. ಚಿ) ೪ ಸಂದುಪ (ಚಿ) ೫ ತುಂ (ಮೈ) ೬ ಹವ್ಯ (ಚಿ) ೭ ಚರಿಸಿ (ಚಿ)

ಉತ್ತಮ ವ್ಯವಹಾರ ಪರಿಣತಂ ತಾನಾಗಿ
ಉತ್ತಮೋತ್ತಮ ಸಂಪದಕೆ ನೆಲೆವನೆಯಾಗಿ | ೧೧೦

ಇರೆ ಮಲುಹಣನನಪ್ಪಿದುದು ಯೌವನೋದಯಂ
ಸ್ಮರನ ಕೆಯ್ಗೆಯ್ದಿತ್ತು ಪುಷ್ಪಚಾಪೋದಯಂ |
ಸವಿನುಡಿಗಳಂ ಕಿವಿಗಳಾಲಿಸಲ್ ತೊಡಗಿದುವು
ಅವಯವಂ ಮೃದು[1]ವಸನದಿಚ್ಛೆಯನೊ[1]ಡರ್ಚಿದುವು |
ನೋಟವೊಪ್ಪುವ ರೂಪ[2]ನೆಚ್ಚರಿಸ ತೊಡಗಿದುವು
ತೋಟಿಗೆಳಸುವ [3]ಪುರ್ಬು ಗಂಟಿಕ್ಕತೊಡಗಿದುವು |
ನವಮಧುರಮಂ ಜಿಹ್ವೆ ಬಯಸಲನು[4]ಗೂಡಿತ್ತು
ನವಗಂಧಮಂ ಘ್ರಾಣವಱಿಯಲನುಗೂಡಿತ್ತು |
ನುಡಿ ಮೆಲ್ಲಮೆಲ್ಲನಕ್ಷಿಗಳತ್ತ[5] ಪೊದ್ದಿತ್ತು
ನಡೆಯುರವಣೆಯ[6]ನುಡಿ ಗಮಕದೊಳ್ ಬೆರಸಿತ್ತು | ೧೨೦
ಕರತಳಂ ತನುರುಚಿಯಂ[7]ನೋವಲಂಗೈಸಿದುವು
ಕರಣತತಿ ಭೋಗ[8] ಸಂಪದವನಿಚ್ಛೈಸಿದುವು |
ಇಂತು ಸರ್ವೇಂದ್ರಿಯಂ ಸುಖದ[9] ಸುಗ್ಗಿಗೆ ಸಲಲ್
ಕಂತು ಚಿಂತಿಸಿದ ಷೋಡಶಪ್ರಾಯದೊಳ್ ನಿಲಲ್ |
ಅಂಗರುಚಿ ಮುಗುದೆಯರ[10] ಕಣ್ಗೆ ಕನ್ನಡಿಯಾಗೆ
ಅಂಗಲತೆ ತರುಣಿಯರ [11]ಸಂಗಸಂಪದವಾಗೆ |
ಸುರಕುಜದ ಚಂದನದ ಕರ್ಪುರದ ಸಸಿಯಂತೆ
ಪರಿಮಳದ ಚಂದ್ರಿಕೆಯ ಕಾಂತಿ ಕರುವಿಟ್ಟಂತೆ |
ಬಳೆವುತಿರ್ದಂ ಸುಖಮನೆಳಸಿ ಮಲುಹಣನಿತ್ತ
ಬಳೆವುತಿರ್ದಳ್ ಸುಖಾಕಾರೆ ಮಲುಹಣಿಯತ್ತ | ೧೩೦

ಆ ದೇಶದಧಿದೈವಮೆನಿಪ ವಿಜಯೇಶ್ವರನ
ವೇದಕ್ಕಗಮ್ಯನೆಂದೆನಿಪ ವಿಜಯೇಶ್ವರನ |

---

ಸಲಿಸಿ (ಜ ಹ] ೧-೧ ಕರವನಿಚ್ಛೈಸ ತೊ (ವ್ಯೆ) ೨ ನಿಚ್ಚೈಸ(ವ್ಯೆ) ೩ ಪುರ್ವು (ವ್ಯೆ) ೪ ಗೆಯ್ದಿತ್ತು (ಹಿ) ೫ ತೊಡಗಿತ್ತು (ವ್ಯೆ); ಸೇರಿತ್ತು (ಚಿ) ೬ ನುಳಿದು ೭ ನೊಲವ (ಜ) ೮ ಸಂತತಿ (ವ್ಯೆ) ೯ ಬಯಕೆಗೆ (ವ್ಯೆ ಚಿ); ಬಳಕೆಗೆ (ಹ) ೧೦ ಕೆಯ್ಗೆ (?) ೧೧ ಕಣ್ಗೆ (ಚಿ)

ಲೀಲೆಯಿಂ ಪುರವನೀಕ್ಷಿಸಿದ ವಿಜಯೇಶ್ವರನ
ಕಾಲನಂ ಕಾಮನಂ ಗೆಲಿದ ವಿಜಯೇಶ್ವರನ |
ಪಾತ್ರದ ವಿಳಾಸಿನಿಯೆನಿಪ್ಪ ಪದ್ಮಾವತಿಯ
ಚಿತ್ರತರ ಮಧುರಮಯ ನಾಟಕಕಳಾ[1]ವತಿಯ |
ಎಸೆವ ಬಸುಱೊಳ್ ಬಂದು ಶಿಶುಭಾವವಂ[2] ಕಳೆದು
ಕುಸುಮ ಬಾಣನ ಕೀರ್ತಿ ಬಳೆವಂದದಿಂ ಬಳೆದು |

ಮಲುಹಣಿಯ ಜವ್ವನವನೇನೆಂದು ಬಣ್ಣಿಪೆಂ
ಮಲುಹಣನ ಸುಖಸಿಧಿಯನೇನೆಂದು ಬಣ್ಣಿಪೆಂ | ೧೪೦
ಮನಮನೆಡೆಗೊಂಡನಾ ಮನಸಿಜಂ ಪರಿತಂದು
ತನುವನೆಡೆಗೊಂಡುದಾ ಸೌಭಾಗ್ಯಲತೆ ಬಂದು |
ಪ್ರೇಮದಿಂ ಮಧುರೂಪಿನೊಳ್ ಪುಗಲ್ ನೂತನಂ
ಹೂಮುಡಿಯನಿಂಬುಗೊಂಡುದು ಮಕರಕೇತನಂ |
ಭ್ರೂಲತೆಯನಾಶ್ರೈಸಿತ್ತಿಕ್ಷು ಚಾಪಂ [3]ಕೂಡೆ |
ಆಲೋಕನವನೊತ್ತುಗೊಂಡವಲರ್ಗಣೆ [1]ನೋಡೆ
ಮಿಗೆ ಸೊಬಗಿನಲಿ ಪೊಕ್ಕಳಲ್ಲಿ ರತಿಯೆಯ್ತಂದು |
ಮೊಗಮನೋಲೈಸಿದಳ್ ಸರಸಿಜಶ್ರೀ ಬಂದು
ನೆಯ್ದಿಲ ನಯಂ[4] ಬಂದು ಕರ್ಣಪಾಲಿಕೆಯೊಳಿರೆ |
ಎಯ್ದಿ ಶಶಿಕಾಂತ ಗಂಡಸ್ಥಲಮನಪ್ಪುತಿರೆ ೧೫೦
ಗಂಧವಹನೆಳಸಿ ಮಧುರಶ್ವಾಶ್ವದೊಳ್[5] ಪುಗಲ್ |
ಬಂಧುರಮೃಣಾಳರುಚಿ ಭುಜಲತೆಗಳೊಳ್ ಮಿಗಲ್
ಅಮಳ್ವಕ್ಕಿಗಳ ಚೆಲ್ವು ಘನಕುಚಮನಿಚ್ಛೈಸೆ |
ಕಮಲ ಸೂತ್ರದ[6] ಕಾಂತಿ ಬಾಸೆಯಂ ಬಾಸಣಿಸೆ |
ಬಾಸೆ ತನ್ನಂ ತೋಱಿ ಬಡನಡುವನುಂಟೆನಿಸೆ
ಮೀಸಲ್ಗೊಳನ ಗುಣ್ಪು ಸುೞಿನಾಭಿಯೊಳ್ ನೆಲಸೆ |
ಮದನನಿಳಯದ ವೇತ್ರದಂಡದಾಕೃತಿ ಬಂದು
ಪದಮಳತ್ರಿವಳಿಯೊಳ್ ನೆಲಸಿ ನಲವಿಂ ನಿಂದು |

---

೧ ವಿವೆಯ (ಚಿ) ೨ ತಳೆದು (ಹ) ೩ ನೋಡ (ಜ. ಹ) ೪ ಬಯಸಿ (ವ್ಯೆ. ಚಿ)
೫ ನಿಲಲ್ (ಚಿ) ೬ ಸೊಂಪು (ಚಿ)

ಕೃತಕಾ೧ಚಳದ ೨ಸೊಂಪು ತಂಪು ವೃತ್ತಂ ಬಯಸಿ೨
ಸುತಜಘನಮುಂ ಬಯಸಿ ಪರ್ವಿ ಪದೆಪಿಂದೆಳಸಿ । ೧೬೦
ಕದಳಿಯಾಕೃತಿ ಬಟ್ಟದೊಡೆಗಳಂ ಸಾರುತಿರೆ
ಮಂದನನ ದೊಣೆಯು ಕೀರ್ತಿ ಕಣಕಾಲ್ಗೆ ಸೇರುತಿರೆ ।
ಕೆಂದಾವರೆಯ ಕೆಂಪು ಪದತಳಮನೋಲೈಸೆ
ಮಂದ ೩ಯಾನಕ್ಕೆಳಸಿ ಹಂಸಗತಿಯಾವರಿಸೆ ।

ಇಂತು ಸರ್ವಾಂಗ ಸೌಂದರ್ಯಮಂ ಕೆಳೆಗೊಂಡು
ಕಂತು ೪ಮುದವಾಗಿ ಚೆಲಿಸುವ೪ ರೂಪನೊಳಕೊಂಡು ।
ಅಳಿತುಳಕದಿರ್ಪ ಮಗಮಗಿಪ ಬಿರಿಮುಗುಳಂತೆ
ಎಳಸುವ ಚಕೋರಿ ಮೊಗ೫ವಿಡದ ಚಂದ್ರಿಕೆಯಂತೆ ।
ಪಿಕಚಂಚು ಸಂಚಾರವಿಲ್ಲದೆಳದಳಿರಂತೆ
ಶಂಖಮುಖದಿನಣ್ಣವಱಿಯುದ ೬ ಮಧುರಫಳದಂತೆ । ೧೭೦
ತೊಳತೊಳಗಿ ಬೆಳಗುತಿರ್ದಳ್ ಚಂದ್ರಕಳೆಯಂತೆ
ನಳನಳಸಿ ಬಳೆವುತಿರ್ದಳ್ ೭ಪುಷ್ಪಶರದಂತೆ ।
ಬಳೆವ ಮಲುಹಣಿಯ ರೂಪಂ ಜನನಿ ನೆರೆನೋಡಿ
ಅಳವಲ್ಲದಬ್ಬುಱಿಂ ಸುಖರಸದೊಳೋಲಾಡಿ ।
ನವಯೌವನದ ನೆಲೆಗೆ ಮನದೊಳಗೆ ತೂಪಿಱಿದು
ಅವಯುವದ ಚೆಲ್ವಿಂಗೆ ಕಣ್ಗಳಿಂ ತೂಪಿಱಿದು ।
ಕಡುನೇಹದಿಂದೆ ನವತಾಸ್ಯಮಂ ೮ಮೆಯ್ಗೊಳಿಸಿ
ಮೃಡನೊಲಿವ ೯ರಸಾಗಾನಮುಂ ನೆಱೆ ಕೊರಲ್ಗೊಳಿಸಿ ।
ಮಗಳ೧೦ನೋವುತ್ತೆ ಕಣ್ಣೊಳಗೆ ಮುಚ್ಚುತ್ತಮಿರೆ
ಮಿಗೆ ವಿಳಾಸಿನಿಯರಿಂ ಸಿಂಗರಿಸುತಿರೆಯುಮಿರೆ ॥ ೧೮೦

## ಪ್ರಥಮ ಸ್ಥಲಂ ಸಂಪೂರ್ಣಂ

೧ ಚಳಂ (ವ್ಯೈ) ೨-೨ ಸೊಂಪ ಪೆಂಪ ವೃತ್ತವ ಬಯಸಿ (ವ್ಯೈ); ಸೊಂಪು ವೃತ್ತತೆಗಳಂ ಬಳಸಿ (ಚಿ) ೩ ಯಾನದಲೆಸೆವ (ಚಿ) ೪-೪ ಮೊದಲಾಗಿ ಚಲಿಸಿದ (ಚಿ) ೫ ವಿಡುವ(ವ್ಯೈ) ೬ ಪಕ್ವ (ಹ) ೭ ಕಲ್ಪಲತೆ (ಚಿ) ೮ ಕೆಯ್ಗೊಳಿಶಿ (ಚಿ) ೯ ನಾದರಸಮಂ (ವ್ಯೈ); ರಸಸಾದಮಂ (ಚಿ. ಜ) ೧೦ ನಿಟ್ಟಿಸುತೆ ( ಜ. ಹ. )

# ಎರಡನೆಯ ಸ್ಥಲ

ಕಂದ :

ಹೊಸ ನಡೆ ಹೊಸನುಡಿ ಹೊಸಮುಡಿ
ಹೊಸಹೊಸ ಸೌಭಾಗ್ಯಮೆಸೆವ ಹೊಸ ಲಾವಣ್ಯಂ |
ಹೊಸ ಹರೆಯಂ ಹೊಸ ನೋಟಂ
ಹೊಸ ಜವ್ವನದೇೞ್ಗೆ ಮಲುಹಣಿಗೆ [1]ಚಿತ್ರತರಂ ||

ಗದ್ಯ :

ಇಂತೊಪ್ಪುವ ಚರಣಂ ತೀವಿದ ಮಂದಗತಿಯಿಂ, ಅಪರ-
ಭಾಗಂ ತೀವಿದ ನಿತಂಬದಿಂ, ಉರಂ ತೀವಿದ ಪೆರ್ಮೊಲೆಯಿಂ, ಮೊಗಂ
ತೀವಿದ ಲೋಚನದಿಂದವಯವಂ ತೀವಿದ ಚೆಲ್ವಿಂ, ಮೆಯ್ ತೀವಿದ
ಜೌವನದಿಂ, ಮನಂ ತೀವಿದ ಸುಖದಿಂ ಮೆಱೆದು ಮನಸಿಜಂ ಮುದ್ರಿಸಿದ
ನನೆಗಣೆಯಂತಿರ್ದ ಮಲುಹಣಿಗೆ ಹೊಸ ಹರೆಯದೊಡನೆ ರಸಮಯ-
ವೆನಿಪ್ಪ ನವಲಾಸ್ಯಸಂಪದಂ ಕೈಗೂಡಿತೆಂಬುದಂ ಪದ್ಮಾವತಿಯಱಿದು
ವಸಂತಮಾಸದೊಳೊಂದು ದಿವಸಂ ವಿಜಯೇಶ್ವರದೇವರ ಕೇಳಿಸಲೆಂದು
ಕ್ಷಣಮಂ ಕೆಯ್ಕೊಂಡು ಮಲುಹಣಿಗೆ ಶೃಂಗಾರಂ ಮಾಡಲ್
ಸಖೀಜನಕ್ಕೆ ಪೇೞಲ್, ಕೆಳದಿಯರ್ ನಲಿದು ಬಂದು ಮಾಂದಳಿರ
ಪಸೆಯ ಮೇಲೆ ಪುಷ್ಪಮಂಜರಿಯಿರ್ಪಂತಿರ್ದ ಸುಕುಮಾರಾಂಗಿಗೆ ೧೦
ನನೆಯಂಬಂ ಕೆಯ್ಗೆಯ್ವ ವಸಂತವಿಳಾಸಿನಿಯರಂತೆ ಪಾದಮುದ್ರಿಕೆ-
ಯನಲಂಕರಿಸಿ, ಸೂಡಗಮ[2]ನಮರ್ಚಿ[2] ನೇವುರಮನಳವಡಿಸಿ
ಕಂಕಣಮಂ ತಿರುಂಪಿ ನೂಂಕಿ, ರತ್ನಮುದ್ರಿಕೆಗಳಂ ಕೈಗೊಳಿಸಿ
ಬಾಹುಪೂರಯಮನಿಕ್ಕಿ ಕರ್ಣಾವತಂಸಮಂ ಕೆಳೆಗೊಳಿಸಿ
ಚಕ್ರಮಿಥುನಕ್ಕೆ ಗವಸಣಿಗೆಯಿಕ್ಕುವಂತೆ ಕಂಚುಕಿಯಂ ತೊಡಸಿ
ತೋರಮುತ್ತಿನ ಹಾರಮಂ ಹತ್ತೆಸಾರ್ಚಿ, ಶಶಿಬಿಂಬಕ್ಕೆ ಶುಕ್ರನಂ
ಸೇರಿಸುವಂತೆ ಮುಖಬಿಂಬದೊಳ್ ಮೂಕುತಿಯಂ ಮೇಳವಿಸಿ,
ಕಾಮನಂಬಂ ಕತ್ತುರಿಯ ಸಾಣೆಯಿಕ್ಕುವಂತೆ [3]ಕಜ್ಜಳಮನೆಚ್ಚಿ[3]

---

೧ ಯತಿಚಿತ್ರಂ(ಚಿ) ೨-೨ ನಲರ್ಚಿಸಿ+ಪಾಡಗಮನಿಕ್ಕಿ(ಚಿ) ೩-೩ ಕಣ್ಣಿಂಗೆ ಕಜ್ಜಳವ
ನೆಚ್ಚು (ವ್ಯ)

ಎಳಲತೆಯಂ ಬೆಳ್ದಿಂಗಳಿಂ ಬಾಸಣಿಪಂತೆ ನವ್ಯದುಕೂಲಮಂ
೨೦ ನಿಱಿವಿಡಿದುಡಿಸಿ, ನಿರ್ಮಳ ಶಶಿಬಿಂಬದಂತಿರ್ದ ಮುಖಮಂಡಳಕ್ಕೆ
ಚಂದ್ರಮನ ದೃಷ್ಟಿ ತಾಗದಂತೆ ಕಸ್ತೂರಿ ತಿಲಕಮಂ ನೊಸಲಲಿಟ್ಟು,
ಕಾಮನ ೧ಮೆಯ್ವುಳಗು೧ ಮಱಿಹೊಕ್ಕಂತೆ ಕಟ್ಟಲಿಪ ಮುಡಿಯೊಳ್
ಪೊಸಕುಸುಮದೆಸಳಂ ತುಱುಂಬಿ, ತುಡಿಸಿದಾಭರಣಮುಮಂ ಮುಡಿಸಿದ
ಪೊಸಪುಷ್ಪಂ ನಸುದೋರ್ಪ ಸಪುರವಸ್ತ್ರಮಂ ಮುಸುಂಕಿಟ್ಟು, ಗಿಳಿ
ಹಂಸೆ ಕೋಗಿಲೆ ಕುಸುಮಕುಲಂ ಮಧುಕರಂ ಮಂದಾನಿಲಂ ಚಂದ್ರಿಕೆ
ಚಕೋರಿ ಚಕ್ರವಾಕ ಎಳಲತೆಗಳ್ ನೆಱೆದುಬಂದು ಕಾಮನ
ಹೂವಿನಂಬಂ ನಡುವಿಟ್ಟುಕೊಂಡೋಲೈಸುತ್ತುಂ ಬರ್ಪಂತೆ, ಪದ್ಮಾವತಿ
ಮೊದಲಾದ ಸಕಲ ಸಂಪ್ರದಾಯಮುಂ ಸಖೀಜನಂಗಳುಂ ಸುತ್ತಿಮುತ್ತಿ
ಬರೆ;—ಮಲುಹಣಿಯುಂ ಮರೆಗೊಂಡು ಕಬ್ಬಿನಬಿಲ್ಲಂ ಗೊಲೆಗೆತ್ತಿ
೩೦ ಪುಲ್ಲಶರಂ ನಡೆತರೆ, ಪೂಸಿದ ಚಂದನದ ಜವಾದಿಯ ಯಕ್ಷಕರ್ದಮದ
ಸೌರಭ್ಯದೊಡನೆ ದೆಸೆದೆಸೆಗೆ ಪಸರಿಸಿ ತೀಡುವ ಪೊಸ ಜವ್ವನದ ಪಸಿಯ
ಕಂಪಿನ ಬಱಿವಿಡಿದು ಸುವಿಟರ್ ಕವಿದು ಬರೆ; ತುಂಬಿಗಳ ಝೇಂಕಾರಂ
ಕಂಕಣದ ಝಣತ್ಕಾರಂ, ನೂಪುರದ ಕ್ರೇಂಕಾರಂ ಪಾದಮುದ್ರಿಕೆಯ
ಠಣತ್ಕಾರಂ, ಮದನನ ಧನು ಟಂಕಾರಂ ಬೆರಸಿ ಬಳೆದು ಪುರಜನರ
ಕಿವಿಗೆ ಹೊಸ ಹೊಸ ಸವಿಗೆಳಿಂ ಸಾಲಿಡೆ, ವಿಳಾಸದಿಂ ವಿಜಯೇಶ್ವರ
ದೇವರ ರಂಗಮಂಟಪಕ್ಕೆ ಬಂದು ಚಂದ್ರಧರಂಗೆ ವಂದನಂಗೆಯ್ದು
ಗಿರಿಜಾವಲ್ಲಭನಂ ಕೇಳಿಸಲೆಂದು ಸಕಳ ೨ಸಂಪ್ರದಾಯಮುಂ ಸುದತಿ೨
ಸಂವರಣೆಗೊಂಡು ರಂಗಂ ಬೊಗುತ್ತಿರಲ್ :

—ಇತ್ತಲ್ ಮಲುಹಣನುಂ ವಿಜಯೇಶ್ವರದೇವರ ಶ್ರೀಪಾದ
೪೦ ಪ್ರಣುತನಿತ್ಯನೇಮಾಸಕ್ತನಾಗಿ, ನೊಸಲಲಿಟ್ಟ ಭಸಿತದ, ಕೀಲಿಸಿದ
ಕರ್ಣಾಭರಣದ, ಕೈಗೊಳಿಸಿದ ತೋರಹಾರದ, ಉಟ್ಟುಹೊದೆದ ಹೊಸ
ದುಕೂಲದ ೩ಕಿವಿಯೊಳಣ್ಕೆಗೊಂಡ ಮೃಗಮದದ೩ ಕಕ್ಷಪುಟದೊಳ್

೧—೧ ಕೆಯ್ಪುಗಳ್ ಎಳಲತೆಯಂ (ಚ) ೨—೨ ಸಂಪ್ರದಾಯಮುಂ ಸುಗತಿ (ಮ. ಮೈ) ಸಂಪ್ರದಾಯಮು+ ಸಖೀಜನಂಗಳುಂ ಸುಗತಿ ( ಜ ) ೩—೩ ಕಿವಿಗಳಂ ಕೆಳೆಗೊಂಡ ಜವಾದಿಯ ( ಚ )

ಮಘಮಘಿಪ ಕಸ್ತೂರಿಯ ಸಾರದ ಉದ್ವರ್ತನಂ ಗೆಯ್ದು ಪುಣುಗಿನ
ಚಂದನದ ತುಱುಂಬಿದ ಕುಸುಮಾವಳಿಯ ಹೊಸ ಕಂಪುಂ,
ಸೊಗಯಿಸುವ ಸೊಂಪುಂ, ಮೋಹಿಸುವ ಬೆಳಗುಂ ಮುಪ್ಪುರಿಗೊಂಡು
ಬೞಸಿ ಬೀದಿವರಿವೇಱುಂಜವ್ವನದ ಕೊರ್ಬು ಮರ್ಬುಗೆಡೆಯೆ
ನಿಜನಿಳಯಮಂ ಪೊಱಮಟ್ಟು ಬರ್ಪಾಗಳ್; ವೇದನಾದಾಕ್ಷರದೊಡನೆ
ಅಕ್ಷತೆಗಳಂ ನೀಡುವ ವಿಪ್ರಕುಲದ, ನವೀನ ಗದ್ಯಪದ್ಯದೊಡನೆ
೧ವೊಲುವರಕೆಯಂ ನೀಡುವ ವರಕವಿಗಳ, ಕೈವಾರದೊಡನೆ ಸ್ತುತಿಗಳಂ
ನೀಡುವ ೨ವಂದಿಗಳ೨, ತುಂಬಿಗಳ ನುಣ್ಚರದೊಡನೆ ೩ಜೋಳಿಸಿ ೫೦
ಮಾಣದಾಣತಿಗುಡುವ ಗಾಯಕರ, ಸಮಕುಲಂ ಸಮಶೀಲಂ
ಸಮರೂಪಂ ೪ಸಮಪ್ರಾಯ೪ದೊಡನೆ ಮನಂಗುಡುವ ಮಿತ್ರರೆನಿಪ
ವಿಟವಿದೂಷಕನಾಗರಿಕಪೀಟವರ್ಧನರ ನಡುವೆ–ಕಾಮನ ಕೈಸೆಱೆ
ಬರ್ಪಂತೆ–ವಿಜಯೇಶ್ವರದೇವರ ಶಿವಾಲಯಕ್ಕೆ ನಡೆದುಬಂದು; ಮಲು
ಹಣೆಯ ತನಿನೇಹಂ ತನ್ನನೀತೆಱದೊಳ್ ಸುತ್ತುವುದೆಂಬುದಂ ತೋಱು
ವಂತೆ ಪ್ರದಕ್ಷಣಂ ಬಂದು ಒಳಪೊಕ್ಕು ಸೋಮಧರನ ವಾಮಭಾಗದೊಳ್
ಪದ್ಮಾಸನಾಸೀನನಾಗಿ ಕುಳ್ಳಿರ್ದು ಆಗಮಸ್ಥಾನದೊಳ್ ಭಸಿತಮನಿಟ್ಟು
ಪಂಚಬಾಣಕ್ಕೆಡೆಮಾಡುವಂತೆ ಶೋಷಣ ದಾಹನ ಪ್ಲವನಂಗಳಿಂ
ಹೃದಯಾಧಾರಮಂ ಶುದ್ಧಿಮಾಡಿಕೊಂಡು ಎಲೆದೇವಾ, ಈ ಕನ್ನಿಕೆಯಂ
ಸೋಂಕಿದ ಬೞಿಕ್ಕ ೫ವೆನ್ನಂಗವಿಕಾರವೆಲ್ಲಂ ತನ್ನಂಗದೊಳೆಂಬುದಂ೫ ೬೦
ಮುಟ್ಟಿ ತೋಱುವಂತೆ ಅಂಗನ್ಯಾಸಕರನ್ಯಾಸಮಂ ನಿಮಿರ್ಚಿ, ಎಲೆ
ದೇವಾ ಮಲುಹಣಿಯಂ ಕಂಡಬೞಿಕ್ಕಂ ನಿನ್ನಂ ಕಾಣ್ಬುದಱಿದೆಂಬುದ-
ನಱಿಪುವಂತೆ ಕಣ್ಗಳಂ ಮುಚ್ಚಿ, ಎಲೆ ದೇವಾ ಪಲವುಂ ದಿನಕ್ಕಲ್ಲದೆ
ನಿತ್ಯನೇಮಕ್ಕೆ ಬಾರೆನೆಂಬುದನೇಕಾಂತದೊಳ್ ಬಿನ್ನೈಸುವಂತೆ
ಜಪಮನೆಣಿಸಿ, ಎಲೆ ದೇವಾ, ನಿನ್ನೋಲಗದ ಕನ್ನೆಯಂ ಬೇಗ
ಕರುಣಿಪುದೆಂದು ಕಾಲ್ವಿಡಿವಂತೆ ಲಿಂಗದಂಘ್ರಿಯೊಳ್ ೬ಸ್ಪರ್ಶನಂಮಾಡಿ೬

೧ ನಲಿವರಕೆ (ಹ) ೨—೨ ವಂದಿಜನಂಗಳ (ಚಿ) ೩ ಜೋಲ್ಪಿಸಿ (ವ್ಯ) ೪—೪ ಸಮ-
ಬಲದ ಸಮಪ್ರಾಯ (ಚಿ) ೫—೫ ಎನ್ನೊಳಂಗ ವಿಕಾರವುಂಟೆಂಬುದಂ (ವ್ಯ)
೬—೬ ಪೊರಳ್ದು (ಚಿ)

—ಮಲುಹಣೆಯಂ ಬೇಡಿ ಸದಾಶಿವನಿಂ ಧಾರೆಯಂ ಪಡೆವಂತೆ ಪಾದೋದಕಮಂ ಕೊಂಡು ಪೊಡಮಟ್ಟು ಬೀಳ್ಕೊಂಡು, ಸೌಂದರ್ಯ ಸಂಪನ್ನವಿಳಾಸನಿಧಿ ಸೌಭಾಗ್ಯಸಾರೋದಯಂ ಸುಕುಮಾರ
೭೦ [೧]ಸನ್ನಿಭಂ[೧] ರಸಭರಿತಚಿತ್ತನಪ್ಪ ಮಲುಹಣದೇವಂ ಲಿಂಗಾರ್ಚನೆಯುಂ ತೀರ್ಚಿ ತಿರುಗಿ ಬರ್ಪಾಗಳ್:

ಮಂದಣರಂಗಭೋಗಮಂಟಪದೊಳಿತ್ತರಂಗೊಂಡೋಲಗವಿತ್ತು ಕುಳ್ಳಿರ್ದ ಪರಮಭಕ್ತರ ಸಚಿವರ ರಾಜಪುತ್ರರ ವಡ್ಡವ್ಯವಹಾರಿಗಳ, ಕವಿಗಳ, ಕಳಾವಿದರ, ಸತ್ಕರ, ಸಾಹಿತ್ಯರ, ವಿಳಾಸಿನಿಯರ, ಪುರಜನರ ಪರಿಜನದ ನಡುವಣ [೨]ರಂಗ[೨] ಮಧ್ಯದೊಳ್ ನರ್ತನಂಗೊಡುವ, ತಾಳದ ಗತಿಗೊಡುವ, ಮದ್ದಳೆಯ [೩]ಲಹಣಿಗೊಡುವ, ವಾವುಜದದೆಖ್ಖಾಳಂ ಗೊಡುವ, ಕರಡೆಯ ಸವಿಗೊಡುವ[೪] ಕಹಳೆಯ ನಯಂಗೊಡುವ, ಕೌಸಾಳದ ಹಲ್ಲಣಿಗೊಡುವ, ವಾಸದ ಲಲ್ಲೆಗೊಡುವ, [೫]ಚೇಹಣಿಯರ[೫] ಸಂಗೀತದ ಸಂದಣಿಯೊಳ್
೮೦ ಪುಷ್ಪಾಂಜಳಿಯ [೬]ಸಮಯದೊಳ್[೬] [೭]ನಚ್ಚಿನ ಕನ್ನೆಯ[೭] ವಿವಾಹದೊಳ್,—ಮದನನ ಮುಹೂರ್ತದ ತೆಱೆಸರಿವಂತೆ—ಮಲುಹಣಂ ನೋಡೆನೋಡೆ; ಜವನಿಕೆಯೋಡೆ, ಡೊಣೆಯನಗಲ್ದು ಕಾಮನಂ ಬಿನಂತಿರ್ದ ಮಲುಹಣಿಯ ರೂಪಿನೊಳ್ ನೋಟಂ ಸಿಲುಕಿ, ಎವೆ ಬೆಱಗಾಗಿ, ಕಣ್ಗಳ ಧಾರೆಯಿಂದೊಳಪೊಕ್ಕ ರೂಪು ಕರಣವನೊಕ್ಕಲಿಕ್ಕಿ ಭಾವಮಂ ಭರಿಕೆಯ್ದು ಚಿತ್ತಮಂ ತೊತ್ತಳಂದುಳಿ[೮]ಯೆ; ಜೋಲ್ದು ರ್ಘೂಂಪಿಸಿ ಮಿತ್ರರ ಮೇಲೆ ಮೆಯ್ಯನೀಡಾಡುವ ಜವ್ವನಿಗನಂ ಮಲುಹಣಿ ಭೋಂಕನೆ ನೋಡಿ! ಕಂಡು ಮನಂ ಬೆದಱೆ, ಹೃದಯಂ ನಡುಗಿ, ತನುಬೆಮರ್ತು ಗತಿಸ್ತಂಭಿಸಿ [೯]ಪಯಂ ಪೈಸರಂಬೋಗಿ ಹಸ್ತಮಲಂಗಿ ನೋಟಮಚ್ಚೊತ್ತಿ ಮೂರ್ಛೆಸುವ ಮಗಳಂ ಪದ್ಮಾವತಿ

---

೧—೧ ಸನ್ನಿಭಂ + ಕಟಾಕ್ಷವಿಕ್ಷೇಪಂ (ಜ. ಹ) ೨—೨ ರಂಗಮಂಟಪದ (ಮೈ)
೩ ಲಹರಿ (ಚಿ) ೪ ವೀಣೆಯ (ಹ) ೫—೫ ಮುಖರಿಯ ಚಾರೈಪಗಾಣೆಯರ (ಚಿ)
೬—೬ ಸಂದಣಿಯೊಳ್ (ಚಿ) ೭--೭ ನವೀನ ಕನ್ಯಾವರ (ಚಿ. ಹ) ೮ ದು (ಜ)
೯ ಪದಂ (ಚಿ. ಹ)

ನೋಡಿ ಕಂಡು, ಇದೇನಿದೇನು! ರಂಗಮಂಟಪಂ ವಿರಹಮಂಟಪ ೯೦
ವಾದುದೀಶ್ವರನ ಕೇಳಿಕೆ ರತೀಶ್ವರನ ಕೇಳಿಕೆಯಾದು[೧]ದಕ್ಕ್ಯಾದೊಡಂ[೧]
ಸೋಲ್ತ ಮಱುಹಣಂ [೨]ಸದ್ವರ್ಥನೆಂಬುದನಱಿದು ಮನಮಂ ಬಲಿದು
ಇರ್ವರುಮನೊಡಗೊಂಡುಬಂದು, ಪೆರ್ಚಿದ ನೇಹಮಂ ನೆಲೆವೆರ್ಚ
ಲೊಡರ್ಚಿಸಿ—ಹರಭಕ್ತರ್ಗೆ ಇಹಪರ ಮೆರಡುಂ ಕೈಸಾರ್ಗೆಂಬುದಂ
ನಿಶ್ಚೈಸಿದಂತೆ—ನಿಜ [೩]ನಿಳಯಕೆಯ್ತಂದು[೩] ಕಾಮಕೇಳಿಸದನವೆನಿಪ್ಪ
ಸೆಜ್ಜೆಯ ಮನೆಯ ಸಿರಿಮಂಚದ ಹಂಸತೂಳದ ತಳ್ಪದೊಳ್ ಜವಳಿ-
ಗೊಳಿಸಿ ತಾನುಂ ಸಖೀಜನಮುಂ ಜಾಣಿಂ ಜಾಱಲ್ :

ಅನಂಗಕೇಳಿಗೆ ಮನಂ ಸಂದಣಿಸಿ, ಆಗಲ್ಪಿಂದ್ರಿಯಂಗಳು
ರವಣಿಸಿ ತವಕಮನುಗುಳೆ ಲಜ್ಜೆ ಹೆಜ್ಜೆದೆಗೆಯೆ ಮನಂ ಮುಂದುಗೆಟ್ಟು
ಅನುರಾಗವಗಲ್ದು ಸವಿನೋಟಂ ಒಳಪೊಕ್ಕು ಭೀತಿಬಿಟ್ಟು [೪]ಮುಂದೆ- ೧೦೦
ವಾಳಂ[೪] ಮೈಸಂದು ಸೋಂಕಂ ಸವಿಗಂಡಾಲಿಂಗನಕ್ಕಾತುರಿಸಿ ರೂಪಂ
ಕಣ್ತೀವಿ ನೋಡಿ, ಕುಚಮಾಱಲಪ್ಪಿ ಮೆಯ್ಯಾಱಿ ಕೂಡಿ, ಮನಂದಣಿಯೆ
ಮರೆದರಲುಗೊಂಡ ಚಕೋರನಂ ಬೆಳ್ದಿಂಗಳೊಳ್ ಬಿಸುಟಂತೆ, ಹಸಿದ
ಪಿಕನಂ ಹೊಸಬನದೊಳಿರಿಸಿದಂತೆ, ಬಳಲ್ದ ಚಕ್ರಮಿಥುನಕ್ಕೆ ಬಿಸಿಲಂ
ತಳಿದಂತೆ, ಮನದಾರ್ತದೊಡನೆ [೫]ತನುವಿನ ಸುಖಂ[೫] ತಲೆಗೇಱಿ
ಬೇಱೆ ಬೇಱವಯವದ ಕೂಟಕ್ಕೆ ಸರ್ವಾಂಗಮನೊಪ್ಪಿಸಿಕೊಟ್ಟಪ್ಪಿ-
ದೊಡೆ ಕೂಡಲಱಿದು ಆಗಲ್ದೊಡೆ ಬಾೞಲಱಿದೆನಿಪ ಮಱುಹಣೆಯ
ತನುವಿನ ಕದಂಬಾ[೬]ಮೋದಂ[೬] ತೀಡೆ, ಮನಮೇಘಂ ತೊರೆಯೆ
ನೋಟದ ಮಿಂಚಡರೆ, ಬೞಲ್ಮುಡಿಯೆಂಬ ನವಿಲಾಡೆ, ಕೂಡೆ [೭]ಪುಟ್ಟುವ
[೮]ಸವಿದನಿ ಮೊಳಗೆ[೮], ಎಚ್ಚಱೆಂಬ ಹಂಸೆಱಿಯೋಡೆ, ಮೋಹದ ೧೧೦
ಮುಱಿಗಱಿಯೆ, ಚಿತ್ತಭೂಮಿ ದಣಿಯೆ, ಅನುರಾಗದಬೀಜಂ ಬಿತ್ತಿ
ಮುನಿಸಂಕುರಿಸಿ, ಪ್ರಣಯಕಲಹಂ ಪಲ್ಲವಿಸಿ [೯]ತಿಳಿವಿನ ಮೊನೆ

---

೧—೧ ಅಕ್ಕಕ್ಕ ಸೋಜಗಂ (ಹ) ೨ ಸಮರ್ಥ (ವ್ಯೈ. ಚಿ) ೩—೩ ನಿಜನಿಳಯಕ್ಕೆ ಜವಳಿಯಂತ್ರಮಂ ತರ್ಪಂತೆ ತಂದು (ಚಿ) ೪-೪ ಮುಂದೆವಾಳತನಂ (ವ್ಯೈ) ೫-೫ ತನು-ಸುಖಂ (ವ್ಯೈ) ೬—೬ ಮೋದಾನಿಳಂ (ವ್ಯೈ) ೭ ಪೊಣ್ಮುವ (ಹ) ೮-೮ ಸವಿದನಿಯೆಂಬ ಮೊಳಗು ಮೊಳೆಯೆ (ವ್ಯೈ) ೯ ತನುವಿನ (ಚಿ)

ಮುಗುಳೊತ್ತಿ, ಆಲಿಂಗನಂ ಫಲಿತವಾದ ಸಮಾನುರಾಗದೊಳಗಲ-
ದಿರೆ; ಮತ್ತೆ ಮತ್ತೆ [1]ಬೇಡಿ ಕೂಡುವಲ್ಲಿ ನೋಟವಱಿದಪ್ಪುವ,
ಸೈರಣೆಯುಱಿದು ಸೋಂಕುವ, ಆಸೆಯುಱಿದು [2]ಆಲಿಂಗಿಸುವ, ಬಯಕೆ
ಯುಱಿದುಬೆರಸುವ ಮನವಱಿದನುಭವಿಸುವ ಸುಖವಱಿದು ಪುಳಕಿಸುವ
ತನುವಱಿದು [3]ಜೀವಿಸುವ ಹಮ್ಮುದವಱಿದು ನೆಮ್ಮುವ ಇಚ್ಛೆಯುಱಿದು
ಹೆಚ್ಚುವ, ಅಗ್ಗಳಿಕೆಯುಱಿದು ಬೋಳೈಸುವ ಎಚ್ಚರಿಕೆಯು, [4]ಸಮರತಿ-
ಯೊಳದ್ದು ಹೋಗಿ, ಸುಖದ ಸೋಂಕು [5]ಸೊಕ್ಕು ಮೀಱೆ, ನಲಿವು
೧೨೦ [6]ತಲೆಗತ್ತಿ[6] ನಖಮುಖದಿಂ ಸೆಳೆಯಲನುಮಾನಿಪಲ್ಲಿಂ ಮುನ್ನ, ಮೈಯ
ರೋಮಾಂಚದ ಬಾಸುಱೀಟ್ವಿ ಸುಕುಮಾರಾಂಗಿಗೆ ನೆರೆವಸುಖ
ಸಮಯದೊಳ್, ಕರಣವೆಲ್ಲಂ ನೋಟಂ ನೋಟವಲ್ಲಂ ನುಡಿ, ನುಡಿ
ಯಲ್ಲಂ ವಿರಹಂ ವಿರಹವೆಲ್ಲಂ ದೈನ್ಯ, ದೈನ್ಯವೆಲ್ಲಂ ಸಾತ್ವಿಕ, ಸಾತ್ತ್ವಿಕ-
ವೆಲ್ಲಂ ಮೈ ಮೈಯೆಲ್ಲ, ಕೂಟ, ಕೂಟವೆಲ್ಲಂ ಮನ, ಮನವೆಲ್ಲಂ
ಮೆಚ್ಚು, ಮೆಚ್ಚೆಲ್ಲಂ ಸೋಲ, ಸೋಲವೆಲ್ಲಂ ರಸಮಯವಾಗಿ
ದಿನಂಗಳ್ ನಿಮಿಷಂಗಳಾಗೆ ಸಂವತ್ಸರಂಗಳ್ ಮಾಸಂಗಳಾಗೆ
ಪದ್ಮಾವತಿ ಸಂಪನ್ನೆಯಾಗಿ;

ನಿಚ್ಚಂ ಸಹಸ್ರ ಹೊನ್ನೆಂದು ನೂಱು ವರುಷಕ್ಕೆ ತಂದೆ
ಮಾಡಿತ್ತು ಹತ್ತು ವರುಷಕ್ಕೆಯ್ದದೆ, '**ಧನಂ ತೀರೆ-ಮನಂ ತೀರದಿರೆ**';
೧೩೦ ಮುಡಿದ ಪೂವಗಲ್ದೊಡಂ ಪಿಡಿದ ಪರಿಮಳವಗಲದಿರ್ಪಂತೆ ಮೋಹರಸ
[7]ವಾಱದೆ, ಸಮಸುಖಸಾರಹೃದಯಸಂಜಾತಹರುಷರಾಗಿ ಮಲು-
ಹಣಿಯುಂ ಮಲುಹಣನುಂ ಪರಮಾನು [8]ರಾಗದಿಂ[8]ದೊಳಗಲದಿರೆ;
ಮೆಲ್ಲಮೆಲ್ಲನೆ ಪಲವುಂ ದಿನಕ್ಕೆ ಬರ್ಪ ಹೊನ್ನಿನುರವಣೆಯುಡುಗೆ
ಇರ್ಪಿರವು ತೆರಹು ಗುಂದದಿರೆ ಉಚಿತ ವ್ಯಯರ್ವಾಪ್ತಧನಕ್ಕಡಿಯಿಡೆ;
ಪದ್ಮಾವತಿ ಬೆಚ್ಚಿ ಬೆದಱಿ ಅಚ್ಚಿಗಂಗೊಂಡರ್ಥ[10]ದ ಸವಿಗೆ[10]
ಮನಮುಂ ನಾಲಗೆಯುಂ ಲವಲವಿಸೆ, ಮಿಕ್ಕುಮೀಱಿದ ರಕ್ಕಸಿ

---

೧ ಬೇಱಿ (ಜ) ೨ ಒಡಗೂಡುವ (ಮೈ) ೩ ಕರಗುವ (ಚ) ೪ ಸಮರಸ (ಚ)
೫ ಮಿಕ್ಕು (ಚ. ಹ) ೬-೬ ತಲೆಯೆತ್ತಿ (ಮೈ) ೭ ವಱಿಯದೆ (ಮೈ) ೮-೮ ರಾಗರಸ (ಮೈ)
೯ ಅಲ್ಪ (ಚ) ೧೦—೧೦ ವಾಸಗೆ (ಚ)

ಗುಂಟಣಿ — ಚೂತಮನಪ್ಪಿದ ಮಲ್ಲಿಕಾಲತೆಯಂ ಸಡಿಲಿಸುವ
ಬಿಱುಗಾಳಿಯಂತೆ, ಭೇರುಂಡವಕ್ಕಿಯು ನಡುವ ಸೀಳ[1]ಹೊಯ್ವ[1]
ಲುಬ್ಧಕನಂತೆ, ಮಗಳನಗಲ್ಚಲ್ ಬಗೆದು, ‘ ಏಕಾಂತಮುಂಟು ಮಗಳಂ
ಕರೆ ’ ಯೆಂದು ವಿಳಾಸಿನಿಯರಂ ಮುಳಿದು ಕಳುಪೆ; ಬಂದ ಸಖಿಯರವ- ೧೪೦
ರಿರವಂ ಕಂಡು ಕರೆಯಲಾಱದೆ ಕಣ್ಣನೀರಂ ತೀವಿ ಪೋಗಲುಮಿರಲುಂ
ಅಱಿಯದೆ ಸಿಡಿಮಿಡಿಗೊಳುತ್ತಿರೆ, ತಳುವಿತಂ ಕಂಡು ತಾನೆ ಬಂದು
ರವಣಿಸಿ ನುಡಿದೆಲ್ಲರಂ ಜಡಿದು

“ಏೞಿತೇಳ್ ಮಗಳೆ, ನಿಮ್ಮ ಮಾವಂ ದ್ವೀಪಾಂತರದಿಂದಂ
ದಿವ್ಯ ವಸ್ತ್ರಾಭರಣಗಳಂಗಳಂ ಕೊಂಡು ಬಂದನವಂ ನೋಡಲ್ಕೆಂದೇೞ್
ಮಗಳೆ, ಮಲುಹಣಿ” ಎಂಬ ನುಡಿ ಕಿವಿಯೊಳಂಬಂ ಹೊಸೆದಂತಾಗೆ
ಆಲಿಂಗನಮನಗಲಲಾರದೆ [2]ಅಂತಃಕರಣದೊಳ್ ಹೊತ್ತಿದ
ಕಾಮಗಿಚ್ಚಿನ ತಿದಿಯೊತ್ತಿದ[2] ಕಿಡಿಯಂ ಸೂಸೆ ಸುಯ್ದು ಕೋಪಂ
ಸೂಸಲಱಿದು ಹರಣಂ ಹಾಱಿ[3] ಹಮ್ಮೈಸುತಂತಕ್ಕೆ [3]ತಕ್ಕೆಯ್ಸಿ
ಕೊಳುತುಂ ಸಂತೈಸಿಕೊಳಲಾಱದೆ “ ಈ ರಕ್ಕಸಿಯ [4]ನುಡಿಯುಂ
ಬೇಡಗಿಚ್ಚುಂ[4] ನಂದಿಸಿ ಬರ್ಪೆನಂಜದಿರೆಂಬಂತೆ” ಮಲುಹಣನಂ ದಯಾ
ದೃಷ್ಟಿಯಿಂ ನೋಡಿ ಮೆಲ್ಲನೆಯಾಲಿಂಗನಮಂ [5]ಬಿರ್ಚುವ[5] ಹಂಸೆ ೧೫೦
ಯಂಬುಗೂಡಾಗಿ ಬೀಳ್ವಂತೆ ಮಂಚದಿಂ ನೆಲಕ್ಕೆ ಬೀಳ್ವ ಮಲುಹಣಿಯಂ
ಸಖಿಯರ್ ಕೈಯಾಂತು ಪಿಡಿಯಲ್ಕಂತಂತು ತರಹರಿಸಿ, ನೊಸಲಕಣ್ಣ
ಹೊಗೆ ಹತ್ತಿದ ಪೂವಿನಂಬುಲತೆಗಳಂ ನೆಮ್ಮಿ ಬೞಲ್ದು ಬರ್ಪಂತೆ
ಕೆಳದಿಯರ ಕೆಯ್ಯ ಬಾಯೊಳು ಮೆಯ್ಯನೀಡಾಡಿ ಮೆಲ್ಲಮೆಲ್ಲನೆ ಬಂದು
ತಾಯುಂ ನೋಡಿ ಕೆಯ್ಯಂ ನೀಡಿ “ಎಲೆಪಾಪಿ ಎಲೆ [6]ಸುಖವೈರಿ[6] ಕರೆದ
ಕಾರಣವೇನೆಂಬುದುಂ”, “ಎಲೆ ಮರುಳ್ ಮಗಳೆ, ಅರ್ಥಂ ತೀರ್ದುದು
ಯವ್ವನಂ [7]ಸಾರ್ದುದು, ಇನ್ನೀ ಮಲುಹಣನಂ ಬಿಡುಬಿಡೆಂದು”

---

೧-೧ ಸೀಳಹೊಯ್ವ (ವ್ಯೆ); ಸೀಳಲ್ಬಗೆವ (ಚಿ) ೨-೨ ಅಂತಸ್ಥದೊಳ್ ಹೊತ್ತಿಕ್ಕಿದ ಕಾಮನ ಕಿಚ್ಚಿನಲ್ಲಿ ವಿರಹದ ತಿದಿಯೊತ್ತಿದಂತೆ (ಚಿ) ೩ ಸಂತೈಸಿ ಕೊಳುತುಂ (ವ್ಯೆ) ೪-೪ ನುಡಿಯೆ ಇಡುಗಿಚ್ಚುಂ (ಚಿ) ೫-೫ ಬಿರ್ಚುತ್ತೇರ್ಪಡೆದ (ವ್ಯೆ. ಚಿ) ೬ ಸುಖವೈರಿ+ ನಿಷ್ಕರುಣಿ ಎನ್ನಂ (ವ್ಯೆ)

ನುಡಿಯೆ — ಸಿಡಿಲದನಿಗೇಳ್ದ ಹಂಸೆಯಂತೆ ನಡನಡನೆ ನಡುಗಿ, "ತಾಯೆ ಕಮಲತಂಡುಲವನಾರೋಗಿಸುವ ಹಂಸೆಗೆ ಹರಳನಿಕ್ಕುವರೆ?
೧೬೦ [೧]ಕೋರಕಮಂ ಸವಿವ ಕೋಕಿಳಕ್ಕೆ ಕೊರಡನಿಕ್ಕುವರೆ? ನವ್ಯ ಫಳರಸಮನೀಂಟುವರಗಿಳಿಗೆ ಕಾದನೀರನೆಱೆ[೩]ವರೆ? ದಿವ್ಯ ಪರಿಮಳವನುಂಬ ತುಂಬಿಗೆ ಹೊಗೆಯನಿಕ್ಕುವರೆ? ಬೆಳ್ದಿಂಗಳನಾಸ್ವಾದಿಪ ಚಕೋರಂಗೆ ಬಿಸಿಲಂ [೨]ಮಾಳ್ಪರೆ? ಮಲುಹಣ[೪]ನ ನವೀನಭೇದರ್ ಸುಖದೊಳಿಪ್ಪೆನ್ನೊಡನೀಮಾತಂ ನುಡಿವರೆ? ಲೋಭಮುಂ ತಾಗಿ ಹುಟ್ಟಿದ ದೀನೆ ಕ್ರೋಧಮುಂ ತಾಗಿ ಹುಟ್ಟಿದ ನೀರಸೆ, ಸುಖಮಂ ಕೊಯ್ವ ಮಾನಸಗರಗಸವೆ; ಅಯ್ಯೋ! ಏಕೆನ್ನನಱಿದುಱಿದು ಬಸುಱಿದಱಿದು ಸುಟ್ಟಪೆ? ದಾಕ್ಷಿಣ್ಯದಹನೆ ಹೋಗುಹೋಗೆಂದು" ಭೋಂಕನೆ
೧೭೦ ತಿರುಗಿ ಮಲುಹಣನೊಳ್ ಸುಖಸುಪ್ತಿಯಿಂದಿರ್ಪ ಮಗಳ ಮೋಹಕ್ಕೆ ಪದ್ಮಾವತಿ ಬೆಚ್ಚಿ! ಬೆಱಗಾಗಿ, ಕೆಯ್ಯರ್ಥಮಂ ಸೆಳೆದುಕೊಂಡಂತೆ ಮಲಮಲನೆ ಮಱುಗಿ; ಮಗಳ ದಾಕ್ಷಿಣ್ಯಕ್ಕೆ ಮತ್ತಂ ಕೆಲವು ದಿನವಿರಿಸಿ ಸೈರಿಸಲಾರದೆ ಮಲುಹಣಿಯು ನಂದಂದಿಗೆ ಕರಕರಿಸಿ ಅಗಲ್ಕೆಯ-ನಭ್ಯಾಸಂ ಮಾಡಿ, ಮಲುಹಣನಂ ಸೆಜ್ಜೆಯೊಳ್ ಮೂದಲಿಸಿ ಕುಳ್ಳಿರ್ದೆಡೆಯೊಳ್ ಕುಸುರಿದರಿದು, ನಿಂದಿರ್ದೆಡೆಯೊಳ್ ನೀರಂ ಚೆಲ್ಲಿ ಮನೆಯ ಮುಂದೆ ಸುಳಿವ ಹೊಸ ಹೊಸ ಹರೆಯದ ಸಂಪನ್ನರಪ್ಪ ರಾಜಪುತ್ರರುಟ್ಟುಡಿಗೆಯುಂ ತೊಟ್ಟತುಡಿಗೆಯುಂ ಕಂಡು, ಅವರಂ [೫]ಪುಗಿಸುವೆನೆಂದು[೫] ವಿಳಾಸಿನಿಯರಂ ನಿಷ್ಕಾರಣಂ ಬಡಿದು, ಕಾಳು ಜಗಳಮಂ ತೆಗೆದು, ಬೇನೆಯಿಲ್ಲದೆ [೬]ನರಳ್ದು[೬] ಸಾವಿಲ್ಲದೆ
೧೮೦ ಶೋಕಂಗೆಯ್ದು, ಬರಿ ಸಾಲಕ್ಕೆ ಹುಸಿದಗಹಂ ಕೊಟ್ಟು, ಕಳಿದ ಹೂವಂ ಬಿಸುಡುವಂತೆ ಮಲಹಣನಂ ಪೊರಮಡಿಸಿ; ನಿಸ್ವರರಂ ನಿರಾಕರಿಸಿ ಸಸ್ವರರನಿದಿರ್ಗೊಳಲೆಂದು ಪದ್ಮಾವತಿ ಮಲುಹಣಿಯುಂ ಮಲುಹಣನ ವಿರಹಸಂತಾಪಚಿತ್ತೆಯುಂ [೭]ತಿಳಿಪಿ ಬೋಧಿಸುತುಮಿರೆಯಿರೆ.

## ದ್ವಿತೀಯ ಸ್ಥಲಂ ಸಮಾಪ್ತಂ

---

೧ ಸಾದರ್ಗದು(ವ್ಯೆ. ಚಿ) ೨ ಚೂತಾಂಕುರವಂ(ಚಿ) ೩ ತೋರ್ಪರೆ(ಚಿ) ೪-೪ ನೋಲವಿನ ಭೇದ(ವ್ಯೆ) ೫-೫ ಪುಗಿಸುವೆನೆಂದು ಸೈರಿಸಲಾರದೆ ಹಲುದಿಂದಾಡಂ ಕಚ್ಚಿ ಅವನಂ ಪುಗಿಸ ಬೇಡೆಂದು (ಚಿ ವ್ಯೆ) ೬-೬ ನರಳ್ದು ನೋವಿಲ್ಲದೆ ಪೊರಳ್ದು (ವ್ಯೆ) ೭ ಕೆಡಿಸಲೆಂದು (ವ್ಯೆ)

# ಮೂಱನೆಯ ಸ್ಥಲ

ಕಂದ:

ಪೊಱಮಡಿಸೆ ಮಲುಹಣಂ ನೆಱೆ
ಮಱುಗಿ ಮನಂ ಕುಂದಿ ಕಂದಿ ಮನ್ಮಥಬಾಣಂ |
ಮಱುವೊನೆ ಗಂಡಂ ೧ತಱಿಲೊಳ
ಗೆ೧ಱಗಿಕರಂ ತನುವನುರುಪೆ ೨ಪೊರಳುತ್ತಿರ್ದಂ ||

ಲಲಿತ ರಗಳೆ:

ಇಂತು ಮಲುಹಣನಂಗಜಾಗ್ನಿಯಿಂ ಬೇವುತುಂ
ಸಂತತಂ ಮಲುಹಣಿಯ ಚಿಂತೆಯೊಳ್ ನೋವುತುಂ |
ಪೊಱಮಡಿಸೆ ಪೋಗಲಾಱದೆ ಮನೆಯ ಮುಂದಿರ್ದು
ಮಱುಗಿ ಮನನಿಕ್ಕಿ ತಲೆ೩ಗೆಱೆ೩ದು ತಪಿಸುತ್ತಿರ್ದು |
ನಡೆದು ಗಱಿಗಱನೆ ಪೋಪಂ ಕಾರ್ಯವಿನಿತಿಲ್ಲ
ನುಡಿವನೋರೋರ್ವ ತನ್ನಂ ನುಡಿಸುವರಿಲ್ಲ |
ಸುಮ್ಮನಿರ್ಪಂ ಧ್ಯಾನವೆಳ್ಳನಿತು ೪ಪ್ಪೊಳಗಿಲ್ಲ
ನೆಮ್ಮಿ ಕುಳ್ಳಿರ್ಪನನುಸಂಧಾನವಿನಿತಿಲ್ಲ |
ನಿಂದರಂ ಕಂಡು ಮಲುಹಣಿಯೆಂದು ಸೋಂಕುವಂ
ಬಂದರಂ ಕಂಡು ಮಲುಹಣಿಯೆನು೫ತಪ್ಪುವಂ | ೧೦
ದಾರಿಯೊಳ್ ಬೀದಿಯೊಳ್ ಮಲುಹಣಿಯ ಕಳವಳಂ
ಕೇರಿಕೇರಿಗಳೊಳಗೆ ಮಲುಹಣಿಯ ಕಳವಳಂ |
ನಿಂದಿರ್ದು ಕುಳ್ಳಿರ್ದು ೬ನಡನಡದು ಬೆಚ್ಚುವಂ
ಮುಂದಿರ್ದರಂ ಕಂಡು ಬಂದಂತೆ ಹೆಚ್ಚುವಂ |
ಭಾವರತಿಯೊಳ್ ಕೂಡಿ ಕಣ್ಮುಚ್ಚಿ ಕರಗುವಂ
ಭಾವದಚ್ಚಱಿಯೆ ಕಣ್ದೆಱೆದಱಸಿ ೭ತಿರುಗುವಂ |
೮ತನುವೆತ್ತಿ ಪೊಱವೊಱಲ ಬನದೊಳಗೆ ಪರಿದಲ್ಲಿ
ತನತನಗೆ ತೀವಿರ್ದ ಪೂಗೊಳನ ತಡಿಯಲ್ಲಿ |

---

೧-೧ ತವನಿಯೊಳೆ (ಚ) ೨ ಸುಯ್ಯುತ್ತಿರ್ದಂ (ವ್ಯೆ. ಜ) ೩ ಗರಗಿ (ವ್ಯ) ೪ ತನಗಿಲ್ಲ (ಹ) ೫ ತೆ ತಬ್ಬುವಂ (ಜ) ೬ ನಡ ನಡುಗಿ (ವ್ಯೆ. ಚ) ೭ ಕರಗುವಂ (ಚ) ೮ ಮನ (ವ್ಯೆ)

ಕಮಲಮಂ ಮಲುಹಣಿಯ ಮೊಗಮೆಂದು [೧]ಮುತ್ತುವಂ
ಕುಮುದಮಂ [೨]ಕಣ್ಗಳೆಂದಕ್ಷಿಯೊಳಗೊತ್ತುವಂ[೨] | ೨೦
ಮಧುಕರಂಗಳ ನಳಕ[೩]ವೆಂದು ತಲೆಗೊತ್ತುವಂ[೩]
ಅಧರಮೆಂದಾ ಬಿಂಬಿಫಳಮನಚ್ಚೊತ್ತುವಂ |
ದಾವಾಗ್ನಿಯೆಂದಶೋಕೆಯ ತಳಿರ್ಗೆ ಹೇಱಿಸಾರ್ದು
ಪೂವನಂಗಜಬಾಣವೆಂದೊಳಸಾರ್ದು |
ಬಿಸಿಯ [೪]ಬೆಳಗೆಂದು ಬೆಳ್ದಿಂಗಳಿಗೆ ಹೇಡೈಸಿ
ಪಸಿಯ ಕಿಚ್ಚೆಂದು ಪೊಸಪಲ್ಲವಕ್ಕೆ ತಲ್ಲಣಿಸಿ |
ಓಡಿ ಬಂದೂರೊಳಗೆ ಹಳಹಳಿಸುತುಂ ಪೊಕ್ಕು
ಬಾಡಿ ಬಸವಱಿದು ಮಲುಹಣಿಯ ವಿರಹಂ ಮಿಕ್ಕು |
ಗಱಗಱನೆ ನಾಲ್ಕೈದವಸ್ಥೆ ದೇಹದೊಳೇಱಿ
ಒಳಗೊಳಗೆ ಸುಡಲೊಳಗೆ ಹೊಱಗೆಲ್ಲ ಕಾಹೇಱಿ | ೩೦
ಮೈಸೋಂಕೆ ಮೆಲುಗಾಳಿ ಘರಿಘರಿಲನುರಿದಪುದು
ಕೈಸೋಂಕೆ ಬೆಳ್ದಿಂಗಳಗ್ಗಳಂ ಕಾಯ್ದಪುದು |
ಹೊಕ್ಕ ಕೊಳನುಕ್ಕಿ ನೆಱಿ ಬತ್ತಿ ಬಱಿದಾದಪುವು
ಮಿಕ್ಕು [೫]ಮುಟ್ಟಿದ ಪಲ್ಲವಂಗಳುಱಿ ಸೀದಪುವು |
ಎಂಬ ವಿರಹ[೬]ದ ತಾಪಕಿರಲಾಱ[೬]ದೆಯ್ತಂದು
ಇಂಬಿಲ್ಲದಾತುರಂ ತಲೆಗೇಱಿ ಪರಿತಂದು |

ಮಲುಹಣಿಯ ಮನೆಯ ಮುಂದಲ್ಲಲ್ಲಿ ನಿಂದಿರ್ದು
ಮಲುಹಣಂ ಮತಿಗೆಟ್ಟು ಕಳವಳಿಸುತುಂ ಸಾರ್ದು |
ಉರ[೭]ವಣಿಯ ಕರಣಂಗಳೊಡಗೂಡಿ ತಾಪಿಸುತೆ
**ತಿರುಗಿ ' ಮಲುಹಣಿ ಮಲುಹಣೀ ' ಎಂದು ಮೂರ್ಛಿಸುತೆ |** ೪೦
ತನ್ನಿಂದ ತಾನೆ ಮತ್ತೆಚ್ಚತ್ತು [೮]ನೋವುತುಂ
ಉನ್ನತಾನಂಗಶಿಖಿಯಿಂದುರಿದು ಬೇವುತುಂ |

---

೧ ಮಚ್ಚುವಂ (ಪ) ಮಟ್ಟುವಂ (ಜ. ಚಿ. ಹ) ೨-೨ ಮಲುಹಣಿಯ ಕಣ್ಗಳೆನು ತೊತ್ತುವಂ (ವ್ಯೈ) ೩-೩ ವೆನುತೆ ಸೈತೊತ್ತುವಂ (ವ್ಯೈ) ೪ ಬಿಸಿಲೆಂದು (ವ್ಯೈ) ೫ ಸೋಂಕುವ (ಚಿ) ೬-೬ ವ ತಾಳಲಾಱದಿರ (ಚಿ] ೭ ಉರಿವರಿವ (ಚಿ) ೮ ನೋಡುತುಂ (ವ್ಯೈ)

ನಡೆತಂದು ಮಲುಹಣಿಯ ಬಾಗಿಲೊಳ್ ಬಱಲುತುಂ
ಅಡಿಗಡಿಗೆ ಘನತಾಪವೆಡೆಗೊಂಡು ಕಱಲುತುಂ |
ದೂಱಿಸುತೆ ತಾಪಿಸುತೆ ತಾಂ ಭಿತ್ತಿಯಂ ನೆಮ್ಮಿ
ಹಾಱುತುಂ ಕಣ್ಮುಚ್ಚಿ ಕೊರಗಿ ವಿರಹಂ ಹೊಮ್ಮಿ |
ಮಲುಹಣಿಯ ದನಿಗೇಳ್ದು ಕಿವಿಗೆ ೧ಸೊಗಸಾಗುತುಂ
ಮಲುಹಣಿಯ ನೀಕ್ಷಿಸಿದ ಕಣ್ಗೆ *ತಂಣ್ಪಾಗುತುಂ |
ಕೆಳದಿಯರ್ ಪೊಱಮಡಲ್ ಚರಣದೊಳ್ ಪೊರಳುತುಂ
ಅಳವಲ್ಲದುರವಣಿಯ ತಾಪದೊಳ್ ತೆರಳುತುಂ | ೫೦
ಮನದೊಳಗೆ ಕಣ್ಣೊಳಗೆ ಮಲುಹಣಿಯ ನಱಸುತುಂ
೨ನೆನಹಿನೊಳ್ ನಿದ್ರೆಯೊಳ್೨ ಮಲುಹಣಿಯ ನಱಸುತುಂ |

ಬಂದೆಂಜಲಚೆಲ್ವದೊಂದು ಹೊಸ ಕುಱಿಯೊಳಗೆ
ನಿಂದು ಮಧ್ಯಮರಾತ್ರಿ ಪರ್ಯಂತವದಱೊಳಗೆ |
ಇರಲಲ್ಲಿ ಮಲುಹಣೀದೇವಿಯಾರೋಗಿಸಿದ
ಪರಿಯಾಣಮುಮನೋರ್ವ ಪೊಸ ವಿಳಾಸಿನಿ ತೊಳೆದ |
ಉದಕಮಂ ೩ಚೆಲ್ಲಲಾತನ ಮೇಲೆ ಪಸರಿಸಲ್೩
ಪದೆದು ಪುಳಕಪ್ರತತಿ ತನ್ನ ಮೈಯೊಳ್ ೪ನಿಲಲ್ |
“ **ಹಾ ! ಮಲುಹಣಿ ಮಲುಹಣೀ** ” ಎಂದು ಹಾಱಯಿಸೆ
ಆ ಮಾತು ಮಲುಹಣಿಯ ಕಿವಿಯೊಳಗೆ ಪೊಱಯಿಸೆ | ೬೦
ಮಲುಹಣನ ದನಿಯೆಂದು ಗಱಗಱನೆ ನಡೆತಂದು
“ ಮಲುಹಣ ಇದೇಕಿಂತು ನಿಲುವರೆ ನೀನಿಂದು ? |
೫ಕೆಟ್ಟೆನಾಂ ನೀನಿಲ್ಲಿ ನಿಂದಿರ್ಪೆ ಹೋಗೆನುತೆ೫ ”
ಮುಟ್ಟಿ ೬ಕೈಕೊಡಹಿ ಕಡುವಿರಹಕ್ಕೆ ಕಂಪಿಸುತೆ |
ಹೋಗಲುರಿಯೊಳಗೆ ತುಪ್ಪವನೆರೆದ ತೆಱನಾಗೆ
ಪೂಗಣೆಗಳಿಟ್ಟಣಿಸಿ ಮುಸುಱಿಮನಮಂ ತಾಗೆ |

---

೧ ಮಾಱಾಗುತುಂ *ತೊತ್ತಾಗುತುಂ (ಮ್ಯೆ. ಚಿ. ಮ) ೨—೨ ತನುವಿನೊಳ್ ತವಕದೊಳ್ (ಚಿ. ಹ) ೩—೩ ಚೆಲ್ಲಿದೊಡೆ ಮಲುಹಣನ ಮೇಲುಗಲ್ (ಚಿ.) ೪ ಸಲಲ್ (ಜ) ೫-೫ ಕೆಟ್ಟೆ ನೀನೇಕಿಂತು ನಿಲುವರೇ ಪೋಗೆನುತೆ (ಚಿ.ಮ. ಹ. ಮ್ಯೆ) ೬ ಕೈಗೊಡಲ್ (ಚಿ) [೫ ಮೂದಡಿಸೆ(ಚಿ) ಇದು ಮುಂದಿನ ಪುಟದ ಮೊದಲನೆ ಸಾಲಿಗೆ]

ಮತ್ತೆ ವಿರಹಂ ನೆಗೆದು ಕರಣದೊಳ್ [೫]ನೂರ್ಮಡಿಸೆ
ಹೊತ್ತಿ ಹೊಗೆಯಿಲ್ಲದೊಳಗುರಿವರಿದು ನೂರ್ಮಡಿಸೆ |
ನಿಂದಿರ್ದ [೧]ನಿರ್ದನಿರ್ದಂ ಮಹಾ[೧]ನಿಶಿಯೊಳಗೆ
ಸಂದಣಿಸಿ ಮಂದೈಸಿ ಕವಿವ ಹೊಸ ಹಿಮದೊಳಗೆ | ೭೦
ಇರೆ ಕಱೆದುದತಿ ನೂತ್ನ ಶೀತವಾತನ ಮೇಲೆ
ಪರಿಪರಿಪರಿಯ ಹೊಸ ಹಿಮದ ಘಟ್ಟಿಯಾತನ ಮೇಲೆ |
ಮುಚ್ಚಿಮುಸುಕಲು ನಡುವೆ ಮಲುಹಣಂ ನಿಂದಿರ್ದು
[೨]ಅಚ್ಚರಿಯ ವಿರಹದಿಂ ಹಿಮದೊಳಗೆ ಸಂದಿರ್ದು[೨] |
[೩]ಎಳೆಯ ಬೆಳುಮುಗಿಲೊಳಗೆ [೪]ಹೊಳೆವ ಪಾವಕನಂತೆ
ಹೊಳೆವಾಲಿಕಲ್ಲಮನೆಯೊಳಗಿರ್ಪ ರವಿಯಂತೆ |
ದಿಟ್ಟಿಸಲ್[೫] ಕಣ್ಮುಚ್ಚಿ ಹೊಯ್ವ[೫] ಶೀತದ ನಡುವೆ
ಮುಟ್ಟಿದೊಡೆ ಕೈಕಡಿದು ಬೀಳ್ವ ತುಹಿನದ ನಡುವೆ |
ನೆನೆದೊಡೆ ಮನಂ ಮುರುಂಟುವ ಶೀತಳದ ನಡುವೆ
ತನುಕೋಡಿ [೬]ಕೊರಗಿ ಬಱಿದಪ್ಪ[೬] ಶಿಶಿರದ ನಡುವೆ | ೮೦
ಕೊಲುವ ಹಿಮವಾತಂಗೆ ಶಿಶಿರೋಪಚಾರವದು
ಒಲುವ ಬೇಗೆಯ ಬೆಂಕೆಗೊಂಡಲೆವ ಶೀತವದು |
ತಾನಾಗೆ ಹಿಮದ ಗೂಡಾರದೊಳಗಿರ್ಪಂತೆ
ನಾನಾ ಹಿಮೋಪಚಾರದ ಹಿಮದ ಗೃಹದಂತೆ |
ಬೆಳಗಪ್ಪಿನಂ ಶೀತಲಾಲಯದೊಳಗೊಪ್ಪಿರಲ್
ಬೆಳಗಾಗೆ ಮಲುಹಣಿಯ ಕಣ್ಗೆ [೭]ಹೊಸತಾಗಿರಲ್ |

ಕಂಡು ಮಲುಹಣಿ ಇದೇಂ ! ಹಿಮದೊಟ್ಟಲೇಕಿಲ್ಲಿ ?
ಕಂಡೆನಾಂ ಮಲುಹಣಂ ಇರುಳಿರ್ದ ತಾನಿಲ್ಲಿ |
ಅಕಟಕಟ ! ಮಲುಹಣಂ ಹಿಮದೊಳಗೆ ಮುರುಂಟಿದಂ !
ಅಕಟಕಟ ! ಪಾಪಿಗೆನಗೊಲಿದು [೮]ನೆರೆ ಮುೞುಗಿದಂ[೮] ! ೯೦

೧–೧ ನಿಂದಿರ್ದ ಮಲುಹಣಂ (ಚಿ) ೨–೨ ಅಚ್ಚರಿಯ ಹಿಮನೊಳಗೆ ಬೆಚ್ಚಂತಿರೊಳ ಸಾರ್ದು (ಚಿ) ೩ ಎಳಸಿ (ಚಿ) ೪ ನಿಂದ (ಚಿ) ೫–೫ ಕಣ್ಕೋ(ಕ?)ಳೆದು ಬೀಳ್ವ(ವ್ಯ) ಕಣ್ಕರಗಿ ಬೀಳ್ವ (ಚಿ) ೬–೬ ಕರಗಿ ಪಿರಿದಪ್ಪ (ವ್ಯ) ೭ ಸೊಗಸಾಗಿರಲ್ (ಮ) ೮–೮ ತಾಂ ಸುರುಟಿದಂ (ಚಿ)

ಪಾಪಿಯಾದೆಂ ಪಾಪಿಯಾದೆನೆನುತಂತಲ್ಲಿ
ತಾಪಿಸುತ್ತುಂ ಪರಿಚ್ಛೇದಿಸುತ್ತಂತಲ್ಲಿ |
ಅಱಿವಳಿದು ಕಳೆಗುಂದಿ ಮನನೊಂದು ಮರುಗುತುಂ
ಮಱವೆ ಬೇರೂರಿ ತನ್ನೊಳು ತನ್ನನರಸುತುಂ |
ಎಚ್ಚಱಿಕೆಯೊತ್ತೊತ್ತಿನೊಳು ಬೆಚ್ಚಿ ಬೆಮರುತುಂ
ಅಚ್ಚ ಸುಖಸಮರತಿಗಳೊಳಗೆ ಕರಗುತುಂ |
ಸತ್ತೊಡನೆ ಮರಣ ತಪ್ಪದೆನುತುಂ ಬಂದು
ಸುತ್ತಿ೧ ಮುತ್ತಿರ್ದ ೨ಸತಿಯರ್ ಸಹಿತ ನಡೆತಂದು |
'ತೆಗೆ ಹಿಮವ' ಎಂದು ಮರಹುಟ್ಟನಿಂ ತೆಗೆಯಿಸಲ್
೩ಮೊಗೆದು ಕೆಲಬಲಕಿಕ್ಕಿ ಸುತ್ತುಂ ಸಿವಾರಿಸಲ್ | ೧೦೦
ಕಪಟವಱದನುರಾಗವೊಳಗೊಪ್ಪಿ ಮೆಱೆವಂತೆ
ಉಪಚಾರವಱದು ಸತ್ಯಸ್ನೇಹವಿರ್ಪಂತೆ |
ಇರ್ದನಾ ಮಲುಹಣಂ ವಿರಹಕ್ಕೆ ತೆಱಪಾಗಿ
ಇರ್ದನಾ ಮಲುಹಣಂ ತಾಪಕ್ಕೆ ತಂಪಾಗಿ |

ಇರೆ ಕಂಡು ಮಲುಹಣೆ ಮನಂ ಮಱುಗಿ ಬೆಱಗಾಗಿ
ಉರಿವರಿವ ವಿರಹದುರವಣೆಗೆ ಕಲುಮರನಾಗಿ |
ಮಲುಹಣನನಱ್ಕಱಿಂ ಕರುಣದಿಂ ನೋಡುತುಂ
ಮಲುಹಣೆ ಮನಂ ನೊಂದು ದುಃಖದಿಂ ಬಾಡುತುಂ |
**"ಎನ್ನ ಮೇಲಿಕ್ಕುವೀ ಚಿತ್ತದಾತುರತೆಯುಂ**
**ಪನ್ನಗಾಭರಣನೊಳು ಮಾಳ್ಪುದೆನ್ನೊಲುಮೆಯುಂ** | ೧೧೦
ಎಂದ ಮಾತಂ ಕೇಳ್ದು ೪ಬಱಿಕ ನೀನೆನಗರ್ಪೆ೪
ಇಂದುಧರನಂ ಬೇಡು ನಿನ್ನತ್ತ ನಾಂ ಬರ್ಪೆ !
ಎನ್ನ ಹವಣೇಂ ಕೋಟಿ ಮಲುಹಣಿಯರಾಗೆರೇ !
ಮುನ್ನಂ ಶಿವನನಱಿದು ದುಃಖಮುಂ ನೀಗಿರೇ |
ಬೇಡಿಕೊಳ್ಳೀಶ್ವರನೊಳೆನ್ನ ಮಲುಹಣ ಹೋಗು
ನೋಡಬಾರದ ವಿರಹದನುತಾಪಮುಂ ನೀಗು" |

---

೧ ನೆರೆದಿರ್ದ (ಚಿ) ೨ ಸಖಿ (ವ್ಯ) ೩ ತೆಗೆದು (ವ್ಯ) ೪-೪ ಬಳಿಕಲಾಂ ನಿನಗಪ್ಪೆ (ಚಿ)

ಎನೆ ವಿರಹಮಂ ತೆಗೆದು ಹರನ ಮೇಲಿಕ್ಕಿದಂ
ತನಿ ನೇಹಮಂ ಶಿವನ ಮೆಲ್ಲಡಿಗೆ ಸಾರ್ಚಿದಂ ।
ನಡೆತಂದನಾ ಹಿಮವ[೧]ನೋಸರಿಸಿ ಮಲುಹಣಂ
ಮೃಡನಲ್ಲಿಗನುತಾಪವೆಯ್ದುತಿರೆ ಮಲುಹಣಂ । ೧೨೦
ಬರಲಿಲ್ಲ ವಿಜಯೇಶ್ವರನ ರಂಗಮಂಟಪಕೆ
ಹರನ ಶಶಿಧರನ ಶಂಕರನ ಶಿವಮಂಟಪಕೆ ।
ಕಸ್ತುರಿಯ ಸಾರವಣೆ ರಂಜಿಸುವ [೨]ಭೂಮಿಯಂ
ಮುತ್ತುಮಾಣಿಕದಿಂ [೩]ಸವೆದ ರಂಗವಾಲಿಯಂ[೩] ।
ನಡುವೆ ಕೇಳಿಸುವ ತೂರ್ಯತ್ರಯದ ರಹಣಿಯಿಂ
ಪೊಡಮಡುವ ಬಲವರ್ಪ ಕುಣಿವ ಭಕ್ತಾಳಿಯಿಂ ।
ತನತನಗೆ ಭೋರೆಂಬ ದುಂದುಭಿ ರವಂಗಳಿಂ
ತನತನಗೆ ಪೂರೈಪ ಶಂಖಸ್ವರಂಗಳಿಂ ।
ಅಲ್ಲಲ್ಲಿ ಉಚ್ಚರಿಪ ವೇದನಾದಂಗಳಿಂ
ಅಲ್ಲಲ್ಲಿ [೪]ಕೇಳಿಸುವ ಶಿವಕೀರ್ತನಂಗಳಿಂ । ೧೩೦
ತರತರಂಗೊಂಡು ಬಪ್ಪಗ್ಗಣಿಯ [೫]ಹಾದಿಯಿಂ
ನೆರೆನೆರೆದು ತರುತಿರ್ಪ ಪರಿಮಳದ ಹಾದಿಯಿಂ ।
ಪಂಚಧಾರಾಶರ್ಕರಾಭಾಜನಂಗಳಿಂ
ಪಂಚಾಮೃತದ ಹಾಲು ತುಪ್ಪದ ಕೊಡಂಗಳಿಂ ।
ಸಂದಣಿಯ ಸಂಭ್ರಮವನೆಂತಕ್ಕೆ ವೋಸರಿಸಿ
ಇಂದು ಧರನಲ್ಲಿಗಾತುರಚಿತ್ತನುರವಣಿಸಿ ।
ಸಂದಣಿಸಿ [೬]ಕುಣಿವ ಕರಣಂಗಳಿಂ [೭]ಕಡಗುತುಂ
ಬಂದು ಕುಳ್ಳಿರ್ದು ಶಿವನಂ ಹೊಗಳತೊಡಗುತುಂ ।

ದೇವ ಶಂಕರ ಭಕ್ತಜನಮನೋರಥರೂಪ
ದೇವ ಶಶಿಧರ ಶರಣಹೃದಯ ಸದಮಳ [೮]ದೀಪ ।

---

೧ ನೊತ್ತರಿಸಿ (ವ್ಯೈ. ಚಿ) ೨ ಭೂಮಿಕೆಯ (ಚಿ) ೩-೩ ರಂಜಿಸುವ ಮಾಲಿಕೆಯ (ಚಿ)
೪ ಕೀರ್ತಿಸುವ (ಚಿ) ೫ ಧಾರೆಯಿಂ (ವ್ಯೈ) ೬ ಕುದಿವ (ವ್ಯೈ) ೭ ಕರಗುತುಂ (ವ್ಯೈ)
೮ ರೂಪ (ಚಿ)

—“ **ಗೌರೀಕಚಪ್ರಚಯಪುಷ್ಪಗಂಧಕ್ಕೆಳಸಿ** ”—
ಭೋರೆನುತ್ತೆಱಗಿ [೧]ಮಧುಕರಮನನುಕರಿಸಿ |
“ ನೆಱೆವ ಗರಳದಗರುವ ಕರುಣಿಪುದು ಕರುಣಿಪುದು
ಪೆಱೆಯ ಮಧುರಾಂಶುಮಂಡಿತಮಕುಟ ಕರುಣಿಪುದು |
ಸುರಶಿರೋಮಾಲೆಯ ಮಹಾಮಹಿಮ ಕರುಣಿಪುದು
ಸರಸಿಜಾಸನ ಶಿರಃ ಕಂಜಕರ ಕರುಣಿಪುದು |
ಕರುಣಿಪುದು ಕರುಣಾಂಬುನಿಧಿ ಶಂಭು ಕರುಣಿಪುದು
ಗಿರಿಜಾ ಮನೋಹರನೆ ಕರುಣಿಪುದು ಕರುಣಿಪುದು ” |
ಎಂದು ಕುದಿಕುದಿವ ಕರುಣಂಗಳೊಳು ಬಣ್ಣಿಸಲ್
ಬಂದು **ವಿರಹಸ್ತೋತ್ರವೀಶನೊಳ್** [೨]ಸೇರಿಸಲ್ | ೧೫೦

ಶಂಕರಂ ಕೇಳ್ದು ಸೈರಿಸಲಾಱದೈತಂದು
ಭೋಂಕನೆ ಮಹಾಲಿಂಗದಂಗದಿಂ ನಡೆತಂದು |
ಸುರಿವ ಹೂಮಳೆಯೊಳಗೆ ಹೊಯಿವ ದುಂದುಭಿಯೊಳಗೆ
ನೆರೆವ ಗಣಕುಲದೊಳಗೆ ಕರೆವ ಕಹಳೆಗಳೊಳಗೆ |
ಕೆಂಜಡೆಯ ಮಹಾಮಕುಟ ಇಂದುಕಳೆ ರಂಜಿಸಲ್
ಕಱೆಗೊರಲ್ ಪಂಚಮುಖ ದಶಭುಜಂ [೩]ಪಸರಿಸಲ್ |
“ [೪]**ಮೆಚ್ಚಿದೆಂ ಬೇಡಿಕೊಳ್ಳಲವೊ ಮಲುಹಣ ಎನಲ್**[೪]
“ **ಚೆಚ್ಚರಂ ಮಲುಹಣಿಯ ನೀವುದೆಂದೆನಗೆ** ”**ನಲ್** |
“ ಕೊಟ್ಟೆನೆಲೆ ಮಗನೆ ಕೊಟ್ಟೆಂ ಮತ್ತೆ ಬೇಡೆನಲ್
ನಿಟ್ಟೆ ಪಿರಿದಾಯ್ತು ಮಲುಹಣ ಬೇಡು ಬೇಡೆನಲ್ | ” ೧೬೦
“ ದೇವ ಮಲುಹಣಿಯೊಡನೆ ನೂಱು [೫]ವರುಷಂ ಬರ್ದು[೫]
ದೇವಲೋಕಕ್ಕೆ ನಿಮ್ಮಡಿಗಳ್ಗೆ ಸಾರ್ದು |
ತನು ಸಹಿತಲಿರ್ವರುಂ ಬರ್ಪಂತೆ ಕರುಣಿಪುದು
ಮನವಾಱೆ ಸುಖದೊಳಿರ್ಪಂದಮಂ ಕರುಣಿಪುದು ” |
ಎಂದೊಡಭವಂ ಕೊಟ್ಟೆನೆಂದು ಕಾರುಣ್ಯದಿಂ
ಮುಂದಿರ್ದ ಲಿಂಗದೊಳ್ ಪೊಕ್ಕನಾನಂದದಿಂ |

---

೧ ಮಧುವ್ರಜ (ಚಿ) ೨ ಸಂದಿಸಲ್ (ಹ) ೩ ರಂಜಿಸಲ್ (ವ್ಯೆ. ಚಿ) ೪-೪ ಮೆಚ್ಚಿದೆಂ ಮಲುಹಣಾ ಬೇಡಿಕೊಳ್ಳೆಂದೆನಲ್ (ವೈ) ೫-೫ ವತ್ಸರವಿರ್ದು (ಚಿ)

ಪುಗಲಿತ್ತಲಿತ್ತಲೀಶ್ವರನ ಪ್ರಸಾದದಿಂ
ಬಗೆವೆರ್ಚೆ ಮನ[1]ವುಬ್ಬಿ ಬರುತಿರ್ದರೊಪ್ಪದಿಂ |
ಮಲುಹಣಿಯುಮವಳ ತಾಯುಂ ಕೂಡೆ ಮೈಯಿಕ್ಕಿ
ಮಲುಹಣನ ಮುಂದೆ [2]ಬಂದಾನಂದದಿಂದುಕ್ಕಿ | ೧೭೦
ರಂಗಮಂಟಪದೊಳಗೆ [3]ಹರುಷದಿಂ ಮುಂದಿಟ್ಟು
ಲಿಂಗದ ಸಮಾಕ್ಷದೊಳ್ ಮಗಳನೊಪ್ಪಿಸಿಕೊಟ್ಟು |
ಮಗಳುಮಂ ಮಲುಹಣನನೂರೊಳಗೆ ಮೆಱೆಯಿಸುತೆ
ಸೊಗಯಿಸುವ ಪ್ರವರಸೇನಂ ಬಂದು ಮೆಱೆಯಿಸುತೆ
ಪೊಗಟ್ವಯಾಚಕ ಜನಕೆ ಹೊನ್ನ ಮಳೆಗಱೆವುತುಂ |
ಮಿಗೆ ವಿರಹಿಜನಕೆಯ್ದೆ ಅಖಿಲ ಸುಖವೀವುತುಂ *
ಇರ್ವರಿಗೆಯೊಂದೆ ಸುಖಾಸನ ಛತ್ರದಿಂ
ಸರ್ವಮಂಗಲ ಶಿವಾಚಾರಂಗಳೊಪ್ಪದಿಂ |
ನೋಟಕ ಜನಂಗಳಂ ಕಣ್ಗಳಿಂದೊಲಿಸುತುಂ
ಪಾತಕರ ಪುಣ್ಯಕರ ನೆಱೆ ಮನಂಗೊಳಿಸುತುಂ | ೧೮೦
ಸಖಜನಸುಧಾಂಬುನಿಧಿಚಂದ್ರಮಂ ಮಲುಹಣಂ
ಭಕುತಜನಮುಖಕಮಲಮಾರ್ತಾಂಡ ಮಲುಹಣಂ | *
ಬರೆ ನಿಜನಿವಾಸಕ್ಕೆ ಬಂದನಾನಂದದಿಂ
ಪರಮುನಿತ್ತಾಜ್ಞೆ ಕೈಗೂಡಿ ಸಮುಚಿತ್ತದಿಂ |

ಕಾಮಮುಂ ಕ್ರೋಧಮುಂ ಕಾಮಾರಿಗರ್ಪಿತಂ
ನೇಮಮುಂ ಪ್ರೇಮಮುಂ ಶಶಿಧರಂಗರ್ಪಿತಂ |
ನೋಟಮುಂ ಬೇಟಮುಂ ಪುರಹರಂಗರ್ಪಿತಂ
ಕೂಟಮುಂ ತೃಪ್ತಿಯುಂ ತ್ರಿಣಯನಂಗರ್ಪಿತಂ |
ಕೊಂಡುದುಂ ಸವಿದುದುಂ ಶಂಕರಂಗರ್ಪಿತಂ
ಕಂಡುದುಂ ಕೇಳ್ದುದುಮೀಶ್ವರಂಗರ್ಪಿತಂ | ೧೯೦

---

೧ ಪುಕ್ಕಿ (ಜ) ೨ ಬಂದಾ (ಮೈ) ೩ ಹರುಷಮುಂ (ಮೈ) * ಈ ಏಳು ಸಾಲುಗಳು ತಾಡವಾಲೆ ಮೈಸೂರು ಪ್ರತಿಯಲ್ಲಿ ದೊರೆಯುವುದಿಲ್ಲ.

ಆಗಿ ನೂಱುಂ ವರುಷವಭವನಾಜ್ಞೆಯೊಳಿರ್ದು
ನಾಗ[1]ಭೂಷಣನಿತ್ತ ಭೋಗನಿಕರದೊಳಿರ್ದು |
ಭೂಲೋಕದಿರವು ಸಾಕೆಂದಿರ್ವರುಂ ಬಂದು
ಬಾಲೇಂದುಮೌಳಿಯಲ್ಲಿಗೆ ಭರದೊಳೈತಂದು |

" ದೇವ ಮುನ್ನಿತ್ತೀರಮುಂ ಕರುಣಿಪುದು ತಂದೆ
ದೇವ ಇಲ್ಲಿರವೆಮಗೆ ಸಾಲ್ವು[2]ದಿಂದಲೆ ತಂದೆ |
ಕಾರುಣ್ಯವಾರ್ಧಿ ವಿಜಯೇಶ್ವರನೆ ಕರುಣಿಪುದು
ಮಾರಾರಿ ದುರಿತಾರಿ ಕಾಲಾರಿ ಕರುಣಿಪುದು |
ಭಕ್ತಿ ಸಂತುಷ್ಟ ಸ್ಪಷ್ಟನಿಧಿ ಕರುಣಿಪುದು
ಭಕ್ತ ಪ್ರಶಸ್ತ ಸಂಯುಕ್ತ ವರ ಕರುಣಿಪುದು |
ಗಗನಚರ ಪುರಕಾಲ ವನವಹ್ನಿ ಕರುಣಿಪುದು
ಸಗುಣನಿರ್ಗುಣತತ್ತ್ವ ನಿತ್ಯನಿಧಿ ಕರುಣಿಪುದು |
ಸತ್ಯನೆ ಸದಾಶಿವನೆ ಶಾಶ್ವತನೆ ಕರುಣಪುದು
ನಿತ್ಯನೆ ನಿರಾಶ್ರಯನೆ ನಿರ್ಭಯನೆ ಕರುಣಿಪುದು |
ನಿರ್ಮಲನೆ ನಿರುಪಮನೆ ನಿರವಯನೆ ಕರುಣಿಪುದು
ನಿರ್ಮಳನೆ ನಿಷ್ಕಳಂಕನೆ ಕರುಣಿಪುದು ಕರುಣಿಪುದು |
ಗಜಚರ್ಮದಭವ ಪುಲಿದೊವಲರಸ ಕರುಣಿಪುದು
ಭುಜಗಾಭರಣ [3]ನಿರಾವರಣ ನಿಧಿ[3] ಕರುಣಿಪುದು |
ಉಗ್ರದೇವೋಗ್ರಗರಳಗ್ರೀವ ಕರುಣಿಪುದು
ನಿಗ್ರಹಾನುಗ್ರಹ ಸಮಗ್ರಬಲ ಕರುಣಿಪುದು |
ಅಪ್ರತಿಮನುಗ್ರನುದ್ದಂಡಧರ ಕರುಣಿಪುದು
ಸುಪ್ರಸನ್ನಾತ್ಮ ಗಿರಿಜಾರಮಣ ಕರುಣಿಪುದು | "

ಎಂದು ಹೊಗಳುತ್ತ ಹೊಮ್ಮುತ್ತ ಹತ್ತಿರೆ ಬಂದು
ಇಂದುಧರನೊಳಹೊಕ್ಕರಾನಂದದಿಂ ಬಂದು |

---

೧ ಭೂಷಣನಿರ್ದ (ವ್ಯ. ಚಿ) ೨ ದಿನ್ನಲೆ (ಚಿ) ೩—೩ ಸುಧಾಕಿರಣಧರ (ವ್ಯ)

ಮೇಲೆ ನೆಗೆದುದು ವಿಮಾನಂ ಗಗನವೆಡೆಗೊಳಲ್
ಭೂಲೋಕದೊಳ್ ಪುಷ್ಪವೃಷ್ಟಿ ಸುಖಮೆಂಕುಡಲ್ |
ನೆರೆದ ಕಾಶ್ಮೀರದೇಶಂ ನೋಡಿ ಬೆಱಗಾಗೆ
[೧]ಹರಭಕ್ತರೆಲ್ಲರ್ಗೆ ಸಂತಸಂ ಪಿರಿದಾಗೆ[೧] |
**ಮಲುಹಣನ ಮಲುಹಣಿಯ ಜಯಜಯ ಧ್ವನಿಯೊಳಗೆ**
[೨]ಲಲನೆಯರ ಅನಿಮಿಷರ[೨] ಸೀಗುರಿಯ ನೆಲನೊಳಗೆ |
ಬಂದು ಕೈಲಾಸಮಂ ಪೊಕ್ಕು ಸಂತೋಷದಿಂ
ಇಂದುಧರನಂ ಕಂಡು ವ್ಯೈಯ್ಯಿಕ್ಕೆ ರಾಗದಿಂ |
ಬಂದಿರ್ದ [೩]ಸುಖಮಿಥುನಮಂ ಶಿವಂ ನೆಱೆ[೩]ನೋಡಿ
ಇಂದುಮುಖಿ ಪಾರ್ವತಿಗೆ ತೋಱೆ[೪] ಹರ್ಷಂಗೂಡಿ |

" ಕಡುನೇಹದಿಂದೆ ಮಲುಹಣಿಗೊಲಿದವರಿಂತುಂಟೆ ?
ಬಿಡದುರಿವ ವಿರಹಕ್ಕೆ [೪]ಮೆಯ್ದಂದವರಿಂತುಂಟೆ ? |
ಹಿಮದೊಳಗೆ ನಿಂದಿರ್ದು ಸೈರಿಸಿದರಿಂತುಂಟೆ ?
ಹಿಮಗೃಹದೊಳಗಿರ್ಪಂತೆ ನಿಂದಿರ್ದರಿಂತುಂಟೆ ? |
ಎನ್ನಲ್ಲಿ ಬೇಡೆನಲ್ ಬೇಡಿ ಬಂದವರುಂಟೆ ?
ತನ್ನ ವಿರಹವನೆನ್ನ [೫]ಮೇಲಿಟ್ಟವರಿಂತುಂಟೆ ? " |

ಎಂದು ಕೊಂಡಾಡುತುಂ ಗಣಕುಲಕೆ [೬]ತೋಱುತುಂ
ಮುಂದುವರಿವಾನಂದ [೭]ಜಲದೊಳೋಲಾಡುತುಂ |
ಮಲುಹಣಂಗಲ್ಲಿ [೮]ನಲವಿಂದೆ ಗಣಪದವಿತ್ತು[೮]
ಮಲುಹಣಿಗೆ ರುದ್ರಕನ್ನಿಕೆಯುರಿಪ್ಪಿರವಿತ್ತು |

ಸಕಲಗುಣ ನಿಖಿಳ ಪತಿಯಕಳಂಕನೊಪ್ಪಿದಂ
ಸಕಳ ಸುರ ಮಕುಟಮಣಿ ನಿಕರಪದನೊಪ್ಪಿದಂ |
ಅಸಿತಸಮಭಸಿತವಿಳಸಿತಗಾತ್ರನೊಪ್ಪಿದಂ
ಅಸಿತಗಳ ನಿಶಿತಶರ ಮುಷಿತಪುರನೊಪ್ಪಿದಂ |

೧-೧ ನೆರೆದು ಪುರಜನ ಕಂಗಳ ಮುಗಿದು ತಲೆದೂಗೆ (ಚಿ) ೨-೨ ಲಲನೆಯರು ಪಿಡಿದಿರ್ದ (ಚಿ) ೩-೩ ಮಲುಹಣನ ನಲವಂ ಶಿವಂ (ಚಿ) ೪-೪ ಪ್ರೈಸಂದ (ಚಿ) ೫ ಮೇಲಿಕ್ಕಿದ (ಜ) ೬ ಬೆಸಸುತುಂ (ಚಿ) ೭ ಸುಖ ( ಚಿ) ೮-೮ ಗಣಪದವಿಯ ನೊಸೆದಿತ್ತು (ಚಿ)

ನರರ ಕಿನ್ನರರ ಖೇಚರರ ಪತಿಯೊಪ್ಪಿದಂ
ಸುರರ ಮುನಿವರರಭಯವರದಕರನೊಪ್ಪಿದಂ ।
ಗಿರಿಜಾಕುಚಾಗ್ರಕುಂಕುಮವಕ್ಷನೊಪ್ಪಿದಂ
ಹರಿಯಜಸುರಮುನಿಗೆ ಗುರುಮೂರ್ತಿಯೊಪ್ಪಿದಂ ।
ಅರರೆ ! ಪಂಪಾಧಿಪತಿಯನವರತಲೊಪ್ಪಿದಂ
ಕರುಣಾಬ್ಧಿ ಹಂಪೆಯ ವಿರೂಪಾಕ್ಷನೊಪ್ಪಿದಂ ।

ಕಂದ :

ಕರುಣಂ ಮಿಗೆ ಮಲುಹಣನಂ
ವಿರಹಾನಳ[1]ದಗ್ಧ ಚಿತ್ತನಂ ಮಲುಹಣಿಯೊಳ್ ।
ನೆರಪಿ ನೆರೆ ಮೆಱೆದ ಪಂಪಾ
ಪುರಪತಿ ವಿರುಪಾಕ್ಷ ಕುಡುಗೆ ಸುಖಸಂಪದಮಂ ॥

ತೃತೀಯ ಸ್ಥಲಂ ಸಂಪೂರ್ಣಂ

# ಮಲುಹಣದೇವ ಚರಿತೆ ಮುಗಿದುದು



---

೧ ಮುಗ್ಧ (ಚ)

ಅನುಬಂಧ

# ಮಲ್ಹಣ ಸ್ತೋತ್ರಮ್

ವಸಂತ ತಿಲಕಾವೃತ್ತಂ:

ಕಾಂತಾಕಚಪ್ರಚಯ ಪುಷ್ಪಸುಗಂಧಿಗಂಧ—
ಲುಬ್ಧಭ್ರಮದ್ಭ್ರಮರ ಕರ್ಬುರಕಂದರಾಯ
ಗಂಧರ್ವಯಕ್ಷ ಸುರಸಿದ್ಧ ಕಿರೀಟಕೋಟಿ—
ಸಂಘಟ್ಟಘೃಷ್ಟಚರಣಾಯ ನಮಶ್ಶಿವಾಯ ॥ ೧ ॥

ನ ಬ್ರಹ್ಮವಿಷ್ಣುವಚಸಾಮಪಿ ಗೋಚರ ಸ್ತ್ವ
ಮಸ್ಮದ್ವಿಧಸ್ಯ ಕಿಮಹೋ ತದವೈಮಿ ಸರ್ವಂ—
ಭಕ್ತಿಸ್ತಥಾಪಿ ಶಿವ ಮಾಂ ಮುಖರೀಕರೋತಿ
ಯುಷ್ಮತ್ಸ್ತುತೌ ಕಥಯ ಕಿಂ ಕರವಾಣಿ ದೇವ ॥ ೨ ॥

ಯೇ ತ್ವಾಂ ಮರೀಚಿಚಯಚಾಮರಚಾರುಚಂದ್ರ—
ಚೂಡಾಮಣೇ ಶೃತಿವಚೋಭಿರಿಹರ್ಚಯಂತಿ ।
ಮಾಯಾಪ್ರಪಂಚರಚನಾನಿಚಯಂ ವಿಲಂಘ್ಯ
ಗಚ್ಛಂತಿ ತೇ ಶಿವಪುರಂ ರುಚಿರೈರ್ವಿಮಾನೈಃ। ॥ ೩ ॥

ಉರ್ವೀ ಸಮೀರಯಜಮಾನ ಜಲಾಸಲಾರ್ಕ
ಸೋಮಾಂಬರಾದಿಭಿ ರಹೋ ಭವತ ಸ್ತನೂಭಿಃ
ವ್ಯಾಪ್ತಂ ಸಮಸ್ತಭುವನಂ ಸಮವೇಕ್ಷ ವಿದ್ವಾನ್
ಕುರ್ಯಾನ್ನ ಕೋಽತ್ರ ಭಗವಂ ಸ್ತ್ವಯಿ ಪಕ್ಷಪಾತಃ ॥ ೪ ॥

# ಮಲ್ಹಣನು ಮಾಡಿದ ಶಿವಸ್ತೋತ್ರದ ತಾತ್ಪರ್ಯ

೧

ಶ್ರೀ ಪಾರ್ವತೀದೇವಿಯ ತುರುಬಿನಲ್ಲಿರುವ ಪುಷ್ಪ ಸುಗಂಧದಿಂದ ಆಕೃಷ್ಟ ಗಳಾಗಿಬಂದು ಸಮೂಹವಾಗಿ ಕೂಡಿದ ಹಲವು ಬಣ್ಣಗಳ ತುಂಬಿಗಳಿಂದ ಚಿತ್ರವಿಚಿತ್ರವಾದ ಕಂಠವುಳ್ಳವನು ಸುರಾಸುರಗಂಧರ್ವಕಿನ್ನರ ಸಿದ್ಧಸಾಧ್ಯರು ಗುಂಪಾಗಿ ಬಂದು ವಿರಾಮವಿಲ್ಲದೆ ನಮಸ್ಕರಿಸುತ್ತಿರುವುದರಿಂದ ಅವರ ಕಿರೀಟಗಳ ಅಗ್ರ ಭಾಗಗಳಿಂದ ಸಂಘರ್ಷಣೆಯುಳ್ಳ ಪಾದಗಳುಳ್ಳವನು ನಿತ್ಯಮಂಗಳವಿಗ್ರಹನು ಆದ ಶಿವನಿಗೆ ನಮಸ್ಕಾರವು.

೨

ಎಲೈ ಪರಮೇಶ್ವರಾ! ವಿಷ್ಣು ಬ್ರಹ್ಮೇಂದ್ರಾದಿಗಳು ಸಹಾ ನಿನ್ನನ್ನು ಸ್ತುತಿಸಿ ನಿನ್ನ ತತ್ತ್ವವನ್ನು ತಿಳಿದುಕೊಳ್ಳಲಾರರು. ಎನ್ನಂತೆ ಅಲ್ಪಜ್ಞನ ವಾಕ್ಯಗಳಿಗೆ ನೀನು ಗೋಚರನಾಗುವಿಯೆಂಬುದು ತುಂಬಾ ಆಶ್ಚರ್ಯ. ಈ ಸಂಗತಿ ನಿನಗೆ ಗೊತ್ತುಂಟು; ಆದರೂ ನಿನ್ನಲ್ಲಿ ಎನಗುಳ್ಳ ಅಸಾಧಾರಣ ಭಕ್ತಿಯು ಈ ಸ್ತೋತ್ರ ರಚನೆಯಲ್ಲಿ ಎನ್ನನ್ನು ವಾಚಾಳನನ್ನಾಗಿ ಮಾಡುತ್ತಿರುವುದು; ದೇವದೇವಾ! ಪರವಶನಾಗಿ ನಾನೀ ಸ್ತುತಿಯನ್ನು ಮಾಡುತ್ತಿರುವನೇ ಹೊರತು ಪಾಂಡಿತ್ಯ ಬಲದಿಂದಲ್ಲ. ನಾನೇನು ಮಾಡಲಿ ಸ್ವಾಮೀ? ನೀನೇ ಅನುಗ್ರಹವಿಟ್ಟು ಹೇಳು.

೩

ಎಲೈ ಚಂದ್ರಶೇಖರಾ! ಈ ಲೋಕದಲ್ಲಿ ನಿನ್ನನ್ನು ವಿಧ್ಯುಕ್ತವಾಗಿ ವೇದ ಮಂತ್ರಗಳಿಂದ ಪೂಜಿಸಿದ ಭಕ್ತರು ಇಂದ್ರಜಾಲಮಯವಾದ ಈ ಪ್ರಪಂಚದ ನಿರಂತರ ಕಾರ್ಯಕಲಾಪದಿಂದ ವಿಮುಕ್ತರಾಗಿ ಮನೋಹರವಾದ ಪುಷ್ಪಕ ವಿಮಾನಗಳಲ್ಲಿ ಅಧಿರೋಹಿಸಿ ಪರಮ ಕಲ್ಯಾಣ ಸ್ವರೂಪವಾದ ಕೈಲಾಸವನ್ನು ಹೊಂದುವರು.

೪

ಎಲೈ ಭಗವಾನ್! ಈ ಸಮಸ್ತ ಪ್ರಪಂಚವನ್ನು ನೆಲ, ನೀರು, ಬೆಂಕಿ, ಗಾಳಿ, ಆಕಾಶ, ಸೂರ್ಯ-ಚಂದ್ರ ಯಜಮಾನರೆಂಬ ಅಷ್ಟಮೂರ್ತಿಗಳೊಡನೆ ಆಹಾ! ನೀನು ವ್ಯಾಪಿಸಿರುವೆ ಇದು ಸುಪ್ರಸಿದ್ಧವಾದುದು. ಇದನ್ನರಿತ ಯಾವ ವಿದ್ವಾಂಸನಾದರೂ ನಿನ್ನನ್ನು ಮರೆಹೋಗದೆ ಇರಬಲ್ಲನೇ? ನಿನ್ನ ಶರೀರವಿಲ್ಲದ ವಿಶ್ವವೇ ಇಲ್ಲ; ಆದಕಾರಣ ಜ್ಞಾನಿಗಳು ನಿನ್ನ ಭಕ್ತರಾಗುವರು.

ಬ್ರಹ್ಮೇಂದ್ರವಿಷ್ಣುಸುರದಾನವಲೋಕಪಾಲೈ-
ರನ್ಯೈಶ್ಚ ಸಿದ್ಧಮುನಿಭಿಃ ಹರಿಪೂಜಿತಂ ತ್ವಾ
ದೃಷ್ಟ್ವಾಪ್ಯಯದತ್ರ ಪುನರಿಚ್ಛತಿ ದೇವ ಮನ್ಯಂ
ಸಂಸಾರಿಣೋ ನರಕಹೇತುರಯಂ ವಿಮೋಹಃ || ೫ ||

ತ್ವಂ ಪಾಸಿ ಹಂಸಿ ವಿಧದಾನಿ ತಿರಸ್ಕರೋಷಿ
ಮುಕ್ತಿಂ ಪರಾಂ ನಯಸಿ ನಿತ್ಯ ಮಶೇಷ ಲೋಕಾನ್ |
ಸರ್ವ ಪ್ರದೋಽಷಿ ಶಿವ ಸರ್ವಕರ ಸ್ತ್ವಮೇವಂ
ಮತ್ವಾಽವಿಕಲ್ಪಮಿತಿ ಜಂತು ರಲೇಪಕಃಸ್ಯಾತ್ || ೬ ||

ಧ್ಯಾತ್ಯೇನ ಯೇಽಪಿ ಭಗವಂತಮನಂತ ಶಕ್ತಿಂ
ಶಂಭೋ ಭವಂತಮಭವಂ ಭವಿನೋನಮಂತಿ |
ತೇಽಪ್ಯಂಧಕಾರಮತಿ ಘೋರಕೃತಾಂತದಂತ-
ಯಂತ್ರಾಂತರಾಳಗಹನಂ ನ ಪುನರ್ವಿಶಂತಿ || ೭ ||

ಕಸ್ಯಾಪರಸ್ಯ ಮಕರಾಹತ ಘೋರನಕ್ರ-
ಚಕ್ರಕ್ರಮಾತ್ ಕಮಲಲೋಲಜಲಾಚ ಗಂಗಾ |
ಖಂಡೇಂದುಕೋಟಿಕರಕೋರಕ ಭಾರಭಾಜಿ
ಬಭ್ರಾಮ ಬಭ್ರುಣಿ ಜಟಾಪಟಲೇ ವಿಮೂಢಾ || ೮ ||

ಎಲೈ ಮಹಾದೇವಾ ! ವಿಷ್ಣು ಬ್ರಹ್ಮದೇವೇಂದ್ರರು, ರಾವಣಾದಿ ರಾಕ್ಷಸರು, ವಾಯು ಕುಬೇರಾದಿ ದೇವತೆಗಳು, ಹರಿಶ್ಚಂದ್ರನಳಾದಿ ಚಕ್ರವರ್ತಿಗಳು, ರೇಣುಕಾದಿ ಸಿದ್ಧರು, ಸಾನಂದಾದಿ ಮಹರ್ಷಿಗಳು ನಿನ್ನನ್ನು ಪೂಜಿಸಿ ಧನ್ಯರಾಗಿರುವರು. ನಿನ್ನನ್ನು ತಿಳಿದು ತಿಳಿದು ಕ್ಷುದ್ರ ದೇವತೆಗಳನ್ನಾರಾಧಿಸಿ ಅವರಿಂದ ಫಲಗಳನ್ನಪೇಕ್ಷಿಸುವ ಬುದ್ಧಿಯು ಸಂಸಾರನರಕವನ್ನನುಭವಿಸುವವನಿಗೇ ಹೊರತು ಜ್ಞಾನಿಗೆ ಹುಟ್ಟುವುದಿಲ್ಲವೆಂಬುದು ನಿಶ್ಚಯು.

೬

ಎಲೈ ಸಾಂಬಪ್ರಭೋ ! ಈ ಸಮಸ್ತ ಲೋಕಗಳನ್ನು ಲೌಕಿಕರನ್ನು ಸೃಷ್ಟಿ ಸ್ಥಿತಿ ತಿರೋಧಾನ ಅನುಗ್ರಹಗಳೆಂಬ ಪಂಚಕೃತ್ಯಗಳಲ್ಲಿ ಯಾವಾಗಲೂ ಶಿಕ್ಷಿಸುತ್ತಾ ರಕ್ಷಿಸುತ್ತಾ ಇರುವುದರಿಂದ ನೀನು ಸರ್ವಜ್ಞತ್ವ, ಸರ್ವ ಕರ್ತೃತ್ವ ಸರ್ವ ಕಾಲಸತ್ವ, ಸರ್ವ ವ್ಯಾಪಕತ್ವಾದಿ ಷಡ್ವಿಧೈಶ್ವರ್ಯ ಸಂಪನ್ನೆಂಬುದು ನಿಶ್ಚಯವು. ಅನವಸರವಾದ ಯಾವ ಸಂಶಯಗಳನ್ನು ಹೊಂದದೆ ಈ ತತ್ವವನ್ನು ತಿಳಿದುಕೊಂಡ ಪ್ರಾಣಿಗಳು ಸಂಸಾರಬಂಧನಗಳಿಗೆ ಸಿಲುಕದೆ ಮುಕ್ತಿ ಹೊಂದುವರು.

೭

ನಿತ್ಯಾನಂದ ಪ್ರದಾಯಕನಾದ ಭೋ ಶಿವನೇ ! ಇಚ್ಛಾಕ್ರಿಯಾ ಜ್ಞಾನಶಕ್ತಿಗಳೆಂಬ ಅಖಂಡ ಮಹಿಮೆಯುಳ್ಳವನು ಸರ್ವಜ್ಞತ್ವ, ಸರ್ವ ಕತೃತ್ವ, ನಿತ್ಯ ತೃಪ್ತಿಗಳೇ ಮುಂತಾದ ಷಡ್ವಿಧಂಗಳಾದ ಅಕ್ಷಯೈಶ್ವರ್ಯಗಳುಳ್ಳವನು. ಜನ್ಮಜರಾಮರಣರಹಿತನೂ ಆದ ನಿನ್ನನ್ನು ಭಕ್ತಿಪೂರ್ವಕವಾಗಿ ಅಲ್ಲದಿದ್ದರೂ, ವ್ಯಾಜದಿಂದಲಾದರೂ ಸ್ತುತಿಸಿದರೆ ಅವರಿಗೆ ನೀನು ಕೈವಲ್ಯವನ್ನು ಅನುಗ್ರಹಿಸುತ್ತಿರುವೆ. ಪುನರ್ಜನ್ಮವನ್ನು ಹೊಂದಿ ಮರಳಿ ಮರಳಿ ಯಮಪಾಶದಲ್ಲಿ ಬಿದ್ದು ಪರಿತಾಪ ಹೊಂದದಂತೆ ಭೀಕರ ಮಾಡುತ್ತಿರುವೆ.

೮

ಭೋ ಪರಮ ಶಿವಾ! ಮೊಸಳೆಗಳು ಕುಂಭೀರಗಳೆಂಬ ಜಲಚರಗಳು ಪರಸ್ಪರ ಹೋರಾಡುವುದರಿಂದ ಕಮಲಗಳಂತೆ ತನ್ನಲ್ಲಿಯ ಜಲವು ಅಲ್ಲೋಲ ಕಲ್ಲೋಲವಾಗುತ್ತಿರಲು ಗಂಗಾನದಿಯು ಭಯಂಕರಾಕಾರವನ್ನು ಹೊಂದಿದ ಸಮಯದಲ್ಲಿ; ಬಾಲಚಂದ್ರನ ಶೃಂಗಗಳಿಂದ ಹೊರಬಿದ್ದು ಮಲ್ಲಿಗೆ ಮೊಗ್ಗಿನಂತಹ ಕಿರಣಗಳುಳ್ಳ ಮತ್ತು ಚಿನ್ನದ ಬಣ್ಣವುಳ್ಳ ನಿನ್ನ ಕೆಂಜೆಡೆಗಳ ಹೊರತು ಮತ್ತಾರ ಶಿರದಲ್ಲಿ ಬದ್ಧವಾಗಿ ನಿರಂತರವು ತಿರುಗುತ್ತಾ ಸ್ಥಾನಮಾಡಿಕೊಂಡಿದೆ! ಅಂಥ ವಿಕಾರವಾದ ಗಂಗೆಯನ್ನು ನೀನು ಮಾತ್ರ ಜಡೆಯಲ್ಲಿ ಬೈಚಿಟ್ಟುಕೊಂಡಿರುವೆ.

ಪ್ರೋತ್ತುಂಗ ಪೀವರಘನಸ್ತನ ಹಾರಭಾರ–
ವಿದ್ಯಾಧರೀ ಭುಜಲತಾಯುಗಪಾಶ ಬದ್ಧಾಃ |
ತೇ ಪರ್ಯಟಂತಿ ಭಗವನ್ ಗಗನೇ ವಿಮಾನೈ
ರ್ತ್ಯೈರರ್ಚಿತೋ ಹರನರ್ಕೈರುಮಯಾ ಸಹತ್ವಂ || ೯ ||

ಭೇರೀಮೃದಂಗ ಸುರದುಂದುಭಿ ಶಂಖನಾದೈ–
ರ್ದೇವಾಂಗನಾ ಕಲಕಲಾಕುಲದಿಙ್ಮುಖೇಷು |
ಕ್ರೀಡಂತಿ ದಿವ್ಯಭವನೇಷು ಸಹಸ್ರರೋಭಿ–
ರ್ಭಕ್ತ್ಯಾಕೃತಂ ತವಪುರೋಮುಖವಾದನಂ ಯೈಃ || ೧೦ ||

ಶಂಭೋ ಪ್ರಸಿದ್ಧ ವಿಭುಧಾಧಿಪ ಸಿದ್ಧಸಾಧ್ಯ–
ವಿದ್ಯಾಧರಾ ಹರಿಪಿತಾಮಹಾಲೋಕಪಾಲಾಃ |
ಅನ್ಯೇಽಪಿ ಸಾಧುವಿಧಿನಾ ಸುಧಿಯೋ ಭವಂತ–
ಮಾರಾಧ್ಯ ಜಗ್ಮುರಮರಾಃ ಪರಮಾಮರತ್ವಂ || ೧೧ ||

ಗೌರೀಪ್ರದಾನ ಸಮಯೇ ಗದಿತೇಽಚಲೇನ
ಗೋತ್ರಂ ತವೇಶ ಕಿಮಿತಿಕ್ಷಣಜಾತಚಿತ್ತಂ |
ಧನ್ಯೈಃ ಪಿತಾಮಹ ಪುರಂಧರ ಲೋಕಪಾಲೈ–
ರ್ದೃಷ್ಟಂ ನಿರುತ್ತರಮುಖಂ ಭವತೋಹಸದ್ಭಿಃ || ೧೨ ||

೯

ಅಷ್ಟವಿಭೂತಿ ಸಂಪನ್ನನಾದ ಎಲೈ ಹರನೇ! ಚಿಚ್ಛಕ್ತಿಯಾದ ಉಮಾ ದೇವಿಸಹಿತನನ್ನಾಗಿ ನಿನ್ನನ್ನು ತಿಳಿದು ಭಜಿಸುವ ಭಕ್ತರನ್ನು, ಯುವ್ವನ ಸೌಂದರ್ಯ ದಿವ್ಯಾಭರಣಭೂಷಿತರಾದ ವಿದ್ಯಾಧರಕಾಂತೆಯರು ತಮ್ಮ ಪುಷ್ಪಕಾದಿ ವಿಮಾನವಲ್ಲಿ ಕುಳ್ಳಿರಿಸಿಕೊಂಡು ತಮ್ಮ ಮೃದುವಾದ ಭುಜಗಳಿಂದ ಆಲಿಂಗಿಸಿಕೊಳ್ಳುತ್ತಾ, ಗಗನದಲ್ಲಿ ಸಂಚರಿಸುವಂತೆ ಮಾಡುತ್ತ ಸೇವಾನು ಸೇವಿಕೆಯರಂತೆ ಆ ಭಕ್ತರ ಆಜ್ಞೆಯನ್ನು ಪಾಲಿಸುವರು.

೧೦

ಎಲೈ ನಟರಾಜನೇ! ನಿನ್ನ ಸನ್ನಿಧಿಯಲ್ಲಿ ಯಾವ ಮಹಾನುಭಾವರು ಭಕ್ತಿಯಿಂದ 'ಭಂ, ಭಂ' ಎಂಬ ಪ್ರಣವದ್ಯೋತಕವಾದ ಮುಖವಾದ್ಯವನ್ನು ಅಥವಾ ವೀಣಾಗಾನವನ್ನು ಮಾಡುವರೋ, ಅಂಥಹ ಧನ್ಯರು ಸ್ವರ್ಗದಲ್ಲಿರುವ ಸೌಧಗಳಲ್ಲಿ ಭೇರಿಮೃದಂಗಗಳು, ದುಂದುಭಿ ಶಂಖಗಳು ಧ್ವನಿಯಾಗುತ್ತಿರಲು, ಗುಂಪಾಗಿದ್ದ ದೇವತಾಸ್ತ್ರೀಯರ ಮಂಜುಲವಾದ ಕಲಕಲಾರಾವಗಳು ನಡೆಯು ತ್ತಿರಲು ರಂಭೆ ಊರ್ವಶಿ ಮೇನಕಾದಿ ಲೋಕೋತ್ತರ ಸುಂದರೀ ಮಣಿಯರು ಸ್ವಾಗತವನ್ನು ಕೊಡುತ್ತಿರಲು ಆಟಪಾಟಗಳಿಂದ ಸುಖವಾಗಿ ಕಾಲವನ್ನು ಕಳೆಯುತ್ತಿರುವರು.

೧೧

ಎಲೈ ಶಂಕರಾ! ವಿಬುಧಾಧಿಪನಾದ ಇಂದ್ರನು, ಬ್ರಹ್ಮ ವಿಷ್ಣು ಸಿದ್ಧ ಸಾಧ್ಯ ವಿದ್ಯಾಧರ ಕುಬೇರಾದಿ ದಿಕ್ಪಾಲಕರು, ಹರಿಶ್ಚಂದ್ರಾದಿ ಚಕ್ರವರ್ತಿಗಳು ಪಾಣಿನಿ ಗೌತಮಾದಿ ಮಹರ್ಷಿ ಪಂಡಿತರು ಇನ್ನೂ ಹಲವು ಪ್ರಖ್ಯಾತರಾದ ದೇವತೆಗಳು ಮುಂತಾದವರೆಲ್ಲರು ಭಕ್ತಿಯುಕ್ತವಾಗಿಯೂ ನಿನ್ನ ಸೇವೆಮಾಡಿ ಆಯಾ ಪದವಿಗಳನ್ನು ಹೊಂದಿ ಧನ್ಯರಾಗಿರುವರು.

೧೨

ಹಿಮಗಿರೀಂದ್ರನು ತನ್ನ ಮಗಳಾದ ಗಿರಿಜಾ ಕುಮಾರಿಯ ಕಲ್ಯಾಣ ವನ್ನು ಶಿವನೊಡನೆ ಮಾಡಲು ನಿಶ್ಚಯಿಸಿ; ಕನ್ಯಾದಾನ ಮುಹೂರ್ತದಲ್ಲಿ ಎಲೈ ಶಂಕರನೇ! "ನಿಮ್ಮ ತಂದೆ-ತಾತಂದಿರ ಹೆಸರೇನು?" ಎಂಬ ಕ್ಷಣದಲ್ಲಿ ಮುನಸ್ಸಿಗೆ ನೆನಪಿಗೆ ಬಂದಂತೆ ಪ್ರಶ್ನೆ ಮಾಡಲು ಯಾವ ಪ್ರತ್ಯುತ್ತರವನ್ನು ಕೊಡದೆ ಮೌನದಲ್ಲಿದ್ದ ನಿನ್ನ ಮುಖವನ್ನು ಅಲ್ಲಿದ್ದ ಧನ್ಯರಾದ ಬ್ರಹ್ಮೇಂದ್ರ ಕುಬೇರಾದಿಗಳು ನಸುನಗುತ್ತಾ ಸಂದರ್ಶಿಸಿದರು.

ಝುಂಕಾರಡಂಬರವಿರಾಜಿಜಲಾಕುಲೇಷು
ಕೈಲಾಸಮೇರುಗಿರಿಗಹ್ವರನಿರ್ಝರೇಷು ।
ತೇ ಪ್ರಾಪ್ನುವಂತಿ ಸುರಸಿದ್ಧವಧೂಕುಲಾನಿ
ಯೇ ನೀಲಕಂಠ ತವ ಪಾದಯುಗಂ ನಮಂತಿ ॥ ೧೩ ॥

ಅನ್ಯೇಽರವಿಂದಮಕರಂದಹೃತಾಳಿವೃಂದ-
ಮಂದಾರಕುಂದದಳದಾಮಭಿರಿಂದುಮೌಳೇ ।
ಪೂಜಾಂ ವಿಧಾಯ ಭವತೋ ವಿಲಸಂತಿ ದೇವ
ದೇವೇಂದ್ರಮಂದಿರವರೇ ಸಹಸುಂದರೀಭಿಃ ॥ ೧೪ ॥

ಗರ್ಜತ್ಪ್ರಚಂಡಘನಘರ್ಘರಮೇಘಸಂಘ-
ಸಂಘಟ್ಟಘೋಷಘನಘೋರರವೇಣ ಕೋಽನ್ಯಃ ।
ಶ್ವೇತಂ ನಯಂತಮತಿಘೋರಕರಾಳಕಾಲಂ
ಭಸ್ಮಾವಶೇಷಮಕರೋದ್ಧರಃ ಹುಂಕೃತೇನ ॥ ೧೫ ॥

ಯೇ ಜೀವನಾಯ ಭವಭಸ್ಮಜಟಾಸ್ಥಿಮಾಲಾ
ಮಾಯಾವಿನೋಪಿ ದಧತೇಹಿ ಭವಂತಿ ಶಂಭೋ ।
ಕರ್ಣಾಟಲಾಟಭಟಹೇಮಕಿರೀಟಕೋಟಿ-
ಸಂಘಟ್ಟಘೃಷ್ಟಚರಣಾ ಯದಿ ಭೂಮಿಪಾಲಾಃ ॥ ೧೬ ॥

೧೩

ಭೋ ಶ್ರೀಕಂಠಾ! ಭಕ್ತಿಯಿಂದ ನಿನ್ನ ಪಾದಾರವಿಂದಗಳನ್ನು ಭಜಿಸು ವವರಿಗೆ ಕೈಲಾಸದ ಮಹಾಭೋಗಗಳು ಕೂಡಲೇ ಲಭಿಸುವವು; ಆ ಕೈಲಾಸ ದಲ್ಲಿಯೂ ಸುಮೇರು ಪರ್ವತದಲ್ಲಿರುವ ಕಾಲುವೆಗಳೆಲ್ಲವೂ ಬಂದು ಮಹಾ ಪ್ರವಾಹವಾಗಿ ಹರಿಯುತ್ತಿರುವುವು. ಆ ನೀರಿನ ಶಬ್ದವು ಕಮಲಗಳ ಬಳಿಯಲ್ಲಿ ಸೇರಿದ ತುಂಬಿಗಳ ಝುಂಕಾರದಂತೆ ಮನೋಹರವಾಗಿರುವುದು. ಆ ನದಿಗಳಲ್ಲಿ ಸಿದ್ಧಸಾಧ್ಯಾದಿ ದೇವತಾ ರಮಣೀಮಣಿಯರು ತೆಪ್ಪಗಳಲ್ಲಿ ವಿಹರಿಸುತ್ತಿರುವರು. ಆ ಸುಂದರ ಸ್ತ್ರೀಯರು ಶಿವ ಭಕ್ತರನ್ನು ತಮ್ಮ ಹಡಗುಗಳಲ್ಲಿ ಕುಳ್ಳಿರಿಸಿ ಕೊಂಡು ಆನಂದವಾಗಿ ವಿಹರಿಸುವಂತೆ ಮಾಡುವರಲ್ಲವೆ ?

೧೪

ಎಲೈ ಚಂದ್ರಮೌಳಿಯೇ! ತಾವರೆ ಮಲ್ಲಿಗೆ ಮುಂತಾದ ಪುಷ್ಪಗಳು ಅರಳುವ ಕಾಲದಲ್ಲಿ ಅವುಗಳ ಸುಗಂಧ ಮಕರಂದದಿಂದ ಗುಂಪುಗುಂಪಾಗಿ ತುಂಬಿಗಳು ಅಲ್ಲಿಗೆ ಬರುವವಲ್ಲವೆ ? ಇಂತಹ ಪ್ರಫುಲ್ಲಗಳಾದ ಹೂವಿನ ಹಾರ ಗಳಿಂದ ನಿನ್ನನ್ನು ಕೈಯ್ಯಾರ ಪೂಜಿಸಿದ ಪುಣ್ಯಾತ್ಮರು ಪ್ರಪಂಚದಲ್ಲಿ ಮಿಗಿಲಾದ ಇಂದ್ರಭವನದಲ್ಲಿ ದೇವತಾರಮಣಿಯರೊಂದಿಗೆ ಸುಖಿಸುವರಲ್ಲವೇ ?

೧೫

ಭಕ್ತ ಪಾಪಹರಾ! ಕ್ರೂರನಾದ ಯಮನು ಕಿಂಚಿತ್ತಾದರೂ ದಯೆ ಯಿಲ್ಲದೆ ರಾಜರ್ಷಿಯಾದ ಶ್ವೇತನನ್ನು ತೆಗೆದುಕೊಂಡು ಹೋಗುತ್ತಿರಲು ಅನೇಕಂಗಳಾದ ಮೇಘಗಳು ಗರ್ಜನೆ ಮಾಡುತ್ತಾ ಕೂಡಿಕೊಳ್ಳುವ ಕಾಲಕ್ಕೆ ಎಂತಹ ಧ್ವನಿ ಹುಟ್ಟುವದೋ ಅಂಥ ಭಯಂಕರವಾದ ಧ್ವನಿಯಿಂದ ನೀನು ಹುಂಕಾರವನ್ನು ಮಾಡಿ ಆ ಭೀಕರನಾದ ಯಮನನ್ನು ನಿಮಿಷಮಾತ್ರದಲ್ಲಿ ಭಸ್ಮೀಪಟಲ ಮಾಡಿದೆಯಲ್ಲವೆ ? ಇಂಥಹ ಅಸಾಧ್ಯವಾದ ಕರ್ತವ್ಯವನ್ನು ನೀನು ಮಾತ್ರವೇ ನಿರ್ವಹಿಸಲು ಸಮರ್ಥನಲ್ಲದೆ ಇತರೆಯವರಿಗೆ ಸಾಧ್ಯವೆ !

೧೬

ಸುಖನಿಲಯನೇ! ಕೆಲವರು ಭಕ್ತಿಯಿಲ್ಲದೆ ಉದರಂಭರಣಾರ್ಥವಾಗಿ ಡಂಭದಿಂದ ನಿನ್ನ ಲಾಂಛನಗಳಾದ ಶ್ರೀ ವಿಭೂತಿ ರುದ್ರಾಕ್ಷಿ ಕಪಾಲಗಳನ್ನು ಧರಿಸಿ ಮಾಯಾ ವೇಷಗಳಿಂದ ಭಿಕ್ಷೆ ಬೇಡಿಕೊಂಡು ಹೊಟ್ಟೆ ಹೊರೆದುಕೊಳ್ಳು ವರು. ಇಂಥ ಡಾಂಭಿಕರೂ ಸಹಾ ಶಿವಲಾಂಛನಗಳನ್ನು ಧರಿಸಿದ ಪುಣ್ಯದಿಂದ ಈ ಜನ್ಮದಲ್ಲಿ ಅಥವಾ ಮುಂದಣ ಜನ್ಮದಲ್ಲಿ ಅಂಗ, ವಂಗ, ಕಳಿಂಗಾಂಧ್ರ ಕರ್ನಾಟಕಾದಿ ದೇಶಗಳಿಗೆ ರಾಜರಾಗಿ ಮಹದೈಶ್ವರ್ಯವನ್ನನುಭವಿಸುವರು. ಇನ್ನು ನಿಜವಾದ ನಿನ್ನ ಭಕ್ತರ ಸದ್ಗತಿಗಳನ್ನರಿತು ಬೇರೆ ಹೇಳಬೇಕಾದುದೇನಿದೆ?

ಕ್ರೀಡಾಪ್ರಪಂಚನಿರತಾ ಶ್ರಿಶವೋ ಭವಂತ-
ಮಾರಾಧಯಂತಿ ವಿವಿಧೇಷುವನೇಷು ದೇವಾಃ ।
ಸಿದ್ಧಾಃ ಸಮಸ್ತಕುಲಶೈಲಗುಹಾಂತರೇಷು
ವಿದ್ಯಾಧರಾ ಮಲಯಮಂಧರ ಕಂದರೇಷು ॥ ೧೭ ॥

ಹೇ ದೇವ ಹೇಮಪುರರಮ್ಯರಸಾತಲೇಷು
ನಾಗಾಂಗನಾಭಿರಸುರೇಂದ್ರನಿತಂಬಿನೀಭಿಃ ।
ನಿತ್ಯಂ ನಿತಂಬಭರಮಂಥರಗಾಮಿನೀಭಿ-
ರಾರಾಧ್ಯ ನೇ ಚ ಹರಮನ್ಮಥವಿಹ್ವಲಾಭಿಃ ॥ ೧೮ ॥

ದಿವ್ಯೌಷಧೀರಸರಸಾಯನಧಾತುವಾದಾ
ಯೋಗಾ ವಶೀಕರಣಗಾರುಡಖನ್ಯವಾದಾಃ ।
ಪಾತಾಳಖಡ್ಗಘಟಿಕಾಂಜನಸಿದ್ಧಿವಾದಾಃ
ಸಿಧ್ಯಂತಿ ತಸ್ಯ ಶಿವ ಯಸ್ಯ ಭವಾನ್ ಪ್ರಸನ್ನಃ ॥ ೧೯ ॥

ಪಾತಾಳತಾಳತಲದಾನವಸುಂದರೀಭಿ-
ರಾಲಿಂಗಿತಾ ಮಕರಕೇತುಶರಾತುರಾಭಿಃ ।
ತೇ ಶೇರತೇ ಧ್ವಜಪಟಾಕುಲಮಂದಿರೇಷು
ಯೇಷಾಂ ತ್ವಮೇವ ಶಿವ ಪುಣ್ಯವತಾಂ ಪ್ರಸನ್ನಃ ॥ ೨೦ ॥

೧೭

ಎಲೈ ಪರಮೇಶ್ವರಾ! ಆಟಪಾಟಗಳಲ್ಲಿ ಬಾಲಕರೂ, ವಿವಿಧೋದ್ಯಾನ ಗಳಲ್ಲಿ ದೇವತೆಗಳೂ, ಕುಲಪರ್ವತದ ಗುಹೆಗಳಲ್ಲಿ ಸಿದ್ಧರೂ, ಮಂದರಮಲಯಾ ಚಲಗಳಲ್ಲಿ ವಿದ್ಯಾಧರರೂ ನಿನ್ನನ್ನು ಪೂಜಿಸುತ್ತಿರುವರು (ನಿನ್ನನ್ನು ಪೂಜಿಸದೆ ಇರುವವರು ಯಾರು?) ಗೋಪಾಲನಾದಿಯಾಗಿ ಭೂಪಾಲನವರೆಗೆ ಎಲ್ಲರೂ ನಿನ್ನನ್ನು ಪೂಜಿಸುತ್ತಿರುವರು.

೧೮

ಎಲೈ ಶಂಕರಾ! ಸುವರ್ಣ ಸೌಧಂಗಗಳುಳ್ಳ ಪಾತಾಳಲೋಕದಲ್ಲಿ ನಿವಾಸ ಮಾಡುವ ನಾಗಗನ್ನಿಕೆಯರು; ಘನವಾದ ನಿತಂಬಗಳಿರುವುದ ರಿಂದಲೂ ಮನ್ಮಥ ಬಾಧೆಯಿಂದಲೂ ಸಂಚರಿಸಲಾರದ ದನುಜ ತರುಣೀ ಮಣಿಯರು ನಿನ್ನನ್ನು ಪೂಜಿಸುತ್ತಾ ವರಗಳನ್ನು ಪಡೆಯುತ್ತಲೇ ಇರುವರು.

೧೯

ಎಲೈ ಸರ್ವ ಮಂಗಳ ಸ್ವರೂಪನೇ! ನಿನ್ನನ್ನು ಪೂಜಿಸಿ ನಿನ್ನ ಕೃಪೆಗೆ ಪಾತ್ರನಾದ ಭಕ್ತನಿಗೆ ಸಂಜೀವಿನೀ ಲತೆಯಿಂದ ಪ್ರಾಣಗಳನ್ನು ಬದುಕಿಸು ವುದು, ಕಾಯಕಲ್ಪದಿಂದ ವೃದ್ಧತ್ವವನ್ನು ಕಳೆಯುವುದು, ಅಣಿಮಾದಿಯೋಗ ಸಿದ್ಧಿಯಿಂದ ಆಕಾಶಗಮನ ಮಾಡುವುದು, ರಾಜಾಧಿರಾಜರ ಭೂತಪ್ರೇತಗಳ ವಶೀಕರಣ ಮಾಡಿಕೊಳ್ಳುವುದು, ಸರ್ಪ ವಿಷಾದಿಗಳನ್ನು ನಿವಾರಿಸುವುದು, ಭೂಮಿಯಲ್ಲಿದ್ದ ಗುಪ್ತ ಧನವನ್ನು ತೆಗೆಯುವುದು, ಪಾತಾಳಾದಿ ದಿವ್ಯ ಲೋಕ ಗಳಿಗೆ ಹೋಗುವುದು, ಸಮ್ಮೋಹನಾಸ್ತ್ರಗಳಿಂದ ಶತೃಗಳನ್ನು ಆಶ್ಚರ್ಯಗೊಳಿ ಸುವುದು, ಘಟದಿಂದ ನದೀ ಸಮುದ್ರವನ್ನು ದಾಟುವುದು, ಅಂಜನದಿಂದ ಭೂತ ಭವಿಷದ್ ವರ್ತಮಾನಗಳನ್ನು ತಿಳಿಸುವುದು ಮುಂತಾದ ಸಮಸ್ತ ಸಿದ್ಧಿಗಳು ವಶವಾಗುವವು ಅಲ್ಲವೇ?

೨೦

ಎಲೈ ಶಶಿಶೇಖರಾ! ನಿನ್ನನ್ನು ಭಜಿಸಿ ನಿನ್ನ ಅನುಗ್ರಹ ಪಡೆಯಬೇಕೇ ಹೊರತು ಸುಖಕ್ಕೆ ಕೊರತೆಯಿಲ್ಲ. ಪಾತಾಳದಲ್ಲಿರುವ ನಾಗಗನ್ನಿಕೆಯರು ಸ್ವತಂತ್ರರಾಗಿ ಮನ್ಮಥಪೀಡಿತರಾಗಿ ಬಂದು ಆಲಿಂಗನ ಮಾಡಿಕೊಂಡು ರೇಷ್ಮೆ ಪಾತಾಕೆಗಳಿಂದ ತುಂಬಿದ ತಮ್ಮ ಶಯ್ಯಾಗೃಹಗಳಲ್ಲಿ ಶಯನಿಸುವಂತೆ ಮಾಡಲಾರರೇ ?

ಸ್ವರ್ಗೇ ವಿಚಿತ್ರಸುರಪಾದಪಮಂಜರೀಭಿ-
ರ್ಮಂದಾಕಿನೀಕನಕಪಂಕಜಯೋಜಿತಾಭಿಃ ।
ಇಂದ್ರಾಽಪ್ಸರೋಭಿರಮರೈರಸುರೈರುಪೇತಃ
ಪೂಜಾಂ ವಿಧಾಯ ಭವತಃ ಪ್ರಣತೋ ಮಹೇಶ ॥ ೨೧ ॥

ತ್ವಾಂ ದೀಪ್ಯಮಾನಮುಕುಟೋತ್ಕಟಚಾರುಹಾರ-
ಕೇಯೂರಕುಂಡಲಧರಾ ಗಿರಿಗಹ್ವರೇಷು ।
ಗಂಧರ್ವಲೋಕಲಲನಾಲಲಿತೈರ್ವಚೋಭಿ-
ರುಚ್ಚೈಃ ಕೃತಾಂಜಲಿಪುಟಂ ಭಗವಂ ಸ್ತುವಂತಿ ॥ ೨೨ ॥

ಜ್ಞಾನಂ ತ್ರಿಕಾಲವಿಷಯಂ ಗಗನೇಚರತ್ವ-
ಮೈಶ್ವರ್ಯಮಷ್ಟಗುಣಿತಂ ಶ್ರವಣಂ ಚ ದೂರಾತ್ ।
ಉತ್ಕ್ರಾಂತಿ ಮುಕ್ತಿ ಪರಕಾಯಪರಪ್ರವೇಶಾ
ಶಂಭೋ ಭವಂತಿ ಭವಿನಾಂ ಭವತಃ ಪ್ರಸಾದತ್ ॥ ೨೩ ॥

ಉಕ್ತಂ ಶಿವೇತಿ ಶಿವ ಯೇನ ದಿವಾಪಿ ರಾತ್ರಾ-
ವುತ್ಕಂಠನಾದ್ಧರ ಹರೇತಿ ಸಕೃನ್ಮೃಷಾಪಿ ।
ಸತ್ಯಂ ಬ್ರವೀಮಿ ಸುರನಾಥ ನ ಪಕ್ಷಪಾತಂ
ಮೂಢೋಽಪಿ ಘೋರನರಕಾತ್ಸ ಬಿಭೇತಿ ಕಸ್ಮಾತ್ ॥ ೨೪ ॥

೨೧

ಎಲೈ ಶಂಭೋ ! ನಿನ್ನನ್ನು ಭಕ್ತಿಯಿಂದ ವಿದ್ಯುಕ್ತವಾಗಿ ಪೂಜಿಸಿ ಶರಣಾಗತನಾದ ಮಹಾನುಭಾವನನ್ನು ಸ್ವರ್ಗದಲ್ಲಿ ಚಿತ್ರವಿಚಿತ್ರವಾದ ಕಲ್ಪ ತರು ಪುಷ್ಪಗಳನ್ನೂ ಮಂದಾಕಿನೀ ನದಿಯಲ್ಲಿರುವ ಚಿನ್ನದ ತಾವರೆ ಹೂವು ಗಳನ್ನೂ ಕಂದಕಗಳಂತೆ ಗಟ್ಟಿಯಾಗಿ ಹಿಡಿದುಕೊಂಡು ಮಹಾನಂದದಿಂದ ದೇವೇಂದ್ರನು, ಅಪ್ಸರ ಸ್ತ್ರೀಯರು ಉಳಿದ ದೇವದಾನವರು ಉತ್ಸಾಹದಿಂದ ಇದಿರ್ಗೊಂಡು ತಮ್ಮ ಪಂಙ್ತಿಯಲ್ಲಿ ಪ್ರಮುಖನನನ್ನಾಗಿ ಮಾಡಿಕೊಂಡು ಸನ್ಮಾನಿಸುತ್ತಿರುವರಲ್ಲವೇ ?

೨೨

ಎಲೈ ಪ್ರಭುವೇ ! ಮೇರು ಮಂದರಾಚಲಗಳಲ್ಲಿ ವಾಸಿಸುವ ಗಂಧರ್ವ ಕಾಂತೆಯರು ಮಹಾ ಭಕ್ತಿಯಿಂದ ನಮಸ್ಕರಿಸುತ್ತಾ ಅತಿ ಸುಂದರವೂ ಪ್ರಕಾಶಮಾನವೂ ಆದ ಕಿರೀಟಗಳನ್ನೂ ಮುತ್ತಿನ ಹಾರಗಳನ್ನೂ ಭುಜಕೀರ್ತಿ ಗಳನ್ನೂ ಪುಷ್ಯರಾಗದ ಕುಂಡಲಗಳನ್ನೂ ಭೂಷಣಗಳನ್ನಾಗಿ ಧರಿಸಿಕೊಂಡು ಮಧುರಮಯ ಗಾಯನದಿಂದ ನಿನ್ನ ಅನಂತ ಮಹಿಮೆಯನ್ನು ನಿತ್ಯವೂ ಕೊಂಡಾಡುತ್ತಿರುವರಲ್ಲವೇ ?

೨೩

ಸುಖಸಾಗರನೇ ? ತ್ರಿಕಾಲಜ್ಞಾನವೂ ಆಕಾಶಗಮನವೂ ಅಣಿಮಾದಿ ಸಿದ್ಧಿಗಳ ಸ್ವಾಧೀನವೂ, ದೂರ ಶ್ರವಣವೂ ತನ್ನ ದೇಶದಲ್ಲಿ ಪ್ರಾಣಿಗಳಿಲ್ಲ ದಂತೆ ತೋರಿಸುವುದು, ಪರಕಾಯ ಪ್ರವೇಶವು ಮುಂತಾದ ಸಮಸ್ತ ಸಿದ್ಧಿಗಳು ನಿನ್ನ ಕೃಪೆಯಿಂದಲೇ ಜೀವಿಗಳಿಗೆ ಲಭಿಸುತ್ತಿರುವವು.

೨೪

ದೇವರಾಜಾ ! ಭಕ್ತಿಯಿಂದಲೋ ಭಕ್ತಿ ವಿಹೀನವಾಗಿಯೋ ಹಗ ಲಿರುಳು "ಹರಹರ ಶಿವಶಿವ, ಕರುಣಾಕರ" ಎಂದು ಯಾವನು ಸ್ಮರಿಸುವನೋ ಅವನು ಶಾಸ್ತ್ರವನ್ನರಿಯದ ಮೂಢನಾದರೂ ಸಹಾ ರೌರವಾದಿ ನರಕ ಭಯಕ್ಕೆ ಅಂಜದೆ ಅಳುಕದೆ ಸರ್ವ ಪಾಪರಹಿತನಾಗಿ ಪರಿಶುದ್ಧನಾಗುವದು ಪಕ್ಷಪಾತದಿಂದಲ್ಲ; ಇದು ಸತ್ಯ ಸತ್ಯವೆಂದು ತಿಳಿಯಬೇಕು.

ಚರ್ಯಾವಬೋಧರಹಿತಾ ಭವಭಕ್ತಿಮಾತ್ರಾ-
ಸ್ನೀತಾ ಸ್ತ್ವಯಾ ಶಿವಪುರಂ ಯದಾಹೋ ಕಿರಾತಾಃ ।
ಜಾತಿಸ್ಮರತ್ವಮಥವಾ ಪರಮಾಮರತ್ವಂ
ಯೋ ತ್ವಾಂ ವಿಮುಕ್ತಿರಥವಾ ಭವತಃ ಪ್ರಸಾದಾತ್ ॥ ೨೫ ॥

ತಸ್ಮಾತ್ಕರೋಮಿ ಯದಭೀಕರಮಪ್ರಮೇಯಂ
ಮೋಹೇನ ಶಂಕರ ಮಯಾ ಯದಕಾರಿ ಪಾಪಂ ।
ಸತ್ವಂ ಪಶುತ್ವತಿಮಿರಂ ಭವಪಾಶಮೀಶ
ಚ್ಛಿಂದಿ ಪ್ರಸಹ್ಯಭಗವನ್ನಪುನರ್ಭವಾಯ ॥ ೨೬ ॥

ತ್ವತ್ಪಾದಪೂಜನರತಾ ಮುನಯೋ ವನೇಷು
ತಿಷ್ಠಂತಿ ಮೂಲದಲಕಂದಫಲಾಶಿನೋ ಯೇ ।
ತೇ ಯಾಂತಿ ಮುಕ್ತಿಪದಮೀಶ್ವರ ತಾಪದಾಸ್ತಾಂ
ಧನ್ಯಾಸ್ತು ತೇ ತವ ಮುಖಾನ್ಯವಲೋಕಯಂತಿ ॥ ೨೭ ॥

ಸ್ಥೀತೇ ಪ್ರಥಿಮ್ನಿ ಜಘನೇಘನಪಾಟಲಿಮ್ನಿ
ಬಿಂಬಾಧರೇ ಕುಚಯುಗೇ ದ್ಯುತಪಿಂಜಲಿಮ್ನಿ ।
ಸ್ತ್ರೀಣಾಂ ಮಹೇಶ ವಿಲಸಂತಿ ಕುತೋ ನರಾಶ್ಚ
ಯೈ ರ್ನಾರ್ಚಿತೋಽಸಿ ನ ನತೋಽಸಿ ನ ಸಂಸ್ತುತೋಽಸಿ ॥ ೨೮ ॥

೨೫

ಲೋಕಕಾರಣನೇ! ಶಾಸ್ತ್ರೋಕ್ತಂಗಳಾದ ಯಾವ ಕ್ರಿಯಾಕಲಾಪಗಳು ತಿಳಿಯದಿದ್ದರೂ ಭಕ್ತಿವಂತನಾದ ಬೇಡರ ಕಣ್ಣಪ್ಪನನ್ನು ಮಹಾ ಕರುಣದಿಂದ ಕೈಲಾಸಕ್ಕೆ ಕರೆದುಕೊಂಡು ಹೋದೆ. ಆಹಾ! ನಿನ್ನ ಭಕ್ತ ಪಕ್ಷಪಾತವನ್ನೇನು ಹೇಳಬೇಕು? ಜಾತಿಸ್ಮರಣೆಯು, ದೇವತಾಜನ್ಮವು ಶಾಶ್ವತವಾದ ಮುಕ್ತಿಯು ನಿನ್ನ ಕೃಪೆಗೆ ಅಧೀನಂಗಳಾಗಿರುವವು. ನಿನ್ನ ದಯೆಯಿಂದ ಆಗಲಾರದ ಕೆಲಸವಾವುದು?

೨೬

ಹೇ, ಸುಖದಾತಾ! ಮೇಲಣಕಾರಣದಿಂದ ಮೂಢನಾದ ನಾನು ಅನೇಕ ಅದ್ಭುತ ದುರಿತಗಳನ್ನಾಚರಿಸಿರುವೆನೋ ಹಾಗೂ ಮಾಡುತ್ತಿರುವೆನೋ ಅವುಗಳಿಗೆ ಕಾರಣವಾದ ಅಜ್ಞಾನಾಂಧಕಾರವನ್ನು ದೂರಮಾಡು. ನಾನಾ ಜನ್ಮಗಳಿಗೆ ಕಾರಣವಾದ ಮಾಯಾ ಸೂತ್ರವನ್ನು ಯಾವುದನ್ನು ಯೋಚಿಸದೆ ಬಲಾತ್ಕಾರವಾಗಿ ಹರಿದುಬಿಡು. ಇನ್ನು ಮುಂದೆ ಜನ್ಮಗಳಿಗೆ ಕಾರಣ ವೆಲ್ಲಿರುವುದು?

೨೭

ಹೇ ಸ್ವಾಮಿ! ವನವನಾಂತರಗಳಲ್ಲಿ ವಾಸ ಮಾಡಿಕೊಂಡು ಕಾಲೋಚಿತವಾಗಿ ಕಂದಮೂಲಾದಿಗಳನ್ನು ಸೇವಿಸುತ್ತಾ ನಿರಂತರವೂ ಶಿವಪೂಜಾ ಪರಾಯಣರಾಗಿ ಮುಕ್ತಿಯನ್ನು ಹೊಂದುತ್ತಿರುವರೆಂದರೆ ಆಗಬಹುದು. ಅದರಲ್ಲಿ ಆಶ್ಚರ್ಯವೇನಿದೆ? ಆದರೆ ನಿನ್ನ ಮುಖಗಳನ್ನವಲೋಕಿಸುವ ಮುನಿಗಳೇ ಧನ್ಯರೆಂದು ಹೇಳಬೇಕಾಗಿದೆ.

೨೮

ಮಹಾ ಪ್ರಭೋ! ಯಾವ ಮಹಾನುಭಾವರು ನಿನ್ನನ್ನು ಅರ್ಚಿಸಿ ನಮಸ್ಕರಿಸಿ ಕೀರ್ತಿಸಲಿಲ್ಲವೋ ಅಂತಹ ಮಾನವರು ಮನೋಹಾರಿಣಿಯರ ವಿಶಾಲವಾದ ಜಘನದಲ್ಲಿಯೂ ಬಿಂಬಾಧರದಲ್ಲಿಯೂ ಪುಷ್ಟವಾದ ವೃಕ್ಷಸ್ಥಲ ದಲ್ಲಿಯೂ ವಿಲಾಸವನ್ನು ಹೊಂದುವುದಿಲ್ಲ. ನಿನ್ನನ್ನು ಪೂರ್ವಜನ್ಮದಲ್ಲಿ ಪೂಜಿಸಿದವರೇ ಅಂಥಹ ಸುಖವಿಲಾಸವನ್ನು ಅನುಭವಿಸುವರು. ಅದಕ್ಕಾದರೂ ಶಿವಾನುಗ್ರಹವಿರಬೇಕು.

ಪ್ರೋದ್ದಾಮಕಾಮಮದಿರಾಮದಲೋಲನೇತ್ರಾ
ರತ್ನಾವಳೀರಝಣಝಣಾರವರಮ್ಯಗಾತ್ರಾಃ ।
ತೇ ಯಕ್ಷಲೋಕವನಿತಾಸು ಚಿರಂ ರಮಂತೇ
ಯೇ ತ್ವಾಂ ಸ್ಮರಂತಿ ಸತತಂ ಮಕರಧ್ವಜಾರೇ ॥ ೨೯ ॥

ಅಂಧಸ್ಯ ಮೇ ಹೃತವಿವೇಕ ಮಹಾಧನಸ್ಯ
ಚೋರೈಃ ಪ್ರಭೋ ಬಲಿಭಿ ರಿಂದ್ರಿಯ ನಾಮಧೇಯೈಃ
ಸಂಸಾರಕೂಪಕುಹರೇ ವಿನಿಪಾತಿತಸ್ಯ
ದೇವೇಶ ದೇಹಿ ಕೃಪಣ್ಯಸ್ಯ ಕರಾವಲಂಬಂ ॥ ೩೦ ॥

ಮೂಢೋ ವಿವೇಕವಿಕಲೋಽಸಕೃದೂರ್ಧ್ವಬಾಹು
ಕ್ಕಿಂ ನ ಶೃಣೋಷಿ ಯದಹಂ ಹರ ರಾರಟೀಮಿ ।
ಮಾಂ ತತ್ರ ಕರ್ಮಣಿ ನಿಯೋಜಯ ದೇವ ಯೇನ
ಸಂಸಾರಚಕ್ರಗಹನಂ ನ ಪುನರ್ವಿಶಾಮಿ ॥ ೩೧ ॥

ಮಾಯಾಪ್ರಪಂಚರಚನಾಚತುರಾ ಸಮಸ್ತ-
ವಸ್ತುಪ್ರಭೇದಭಿದುರಾ ಶಿವ ಸರ್ವಕರ್ತ್ರೀ ।
ಸಂಸಾರಪಾಶವಿಷಮಚ್ಛಿದುರಾ ನರಾಣಾಂ
ಮೋಹಾಂಧಕಾರಭಿದುರಾ ಚ ತವೈವ ಶಕ್ತಿಃ ॥ ೩೨ ॥

ಹೇ ಮಹೇಶ್ವರಾ ! ನೀನು ಮದನಾಂತಕನಾದರೂ ನಿನ್ನನ್ನು ಭಕ್ತಿಯಿಂದ ಭಜಿಸಿ ಕೀರ್ತಿಸುವವರು ಅತ್ಯಧಿಕವಾದ ಕಾಮೋದ್ದೀಪನೆಯಿಂದ ಮುಂದು ಗಾಣದೆ ಯಕ್ಷಲೋಕದ ದಿವ್ಯ ಸುಂದರ ರಮಣೀಮಣಿಯರೊಡನೆ ಕ್ರೀಡಿಸುತ್ತಾ ನಿರಂತರ ಸೌಖ್ಯವನ್ನನುಭವಿಸುತ್ತಿರುವರು. (ಶಿವನು ಕಾಮ ವಿರೋಧಿಯಾದರೂ ಅನನ್ಯ ಭಕ್ತರ ಇಷ್ಟಾರ್ಥಗಳನ್ನು ಅನುಗ್ರಹಿಸುವ ಮಹಾ ಕರುಣಾಮಯನೆಂಬ ಭಾವವು) ಶಿವಭಕ್ತರಿಗೆ ಅಸಾಧ್ಯವಾವುದು ?

೩೦

ಹೇ ಪರಮಶಿವಾ ! ಮಹಾ ಬಲವಂತರಾದ ಇಂದ್ರಿಯ ನಾಮಕರಾದ ಚೋರರು ಅಜ್ಞಾನವೆಂಬ ಅಂಧತ್ವವುಳ್ಳ ನನ್ನ ವಿವೇಕವೆಂಬ ಧನರಾಶಿಯನ್ನಪಹರಿಸಿ, ಸಂಸಾರವೆಂಬ ಕೂಪದಲ್ಲಿ ತಳ್ಳಿರುವರು; ಇಲ್ಲಿ ಬಿದ್ದು ಬಹು ಪರಿತಪಿಸುತ್ತಿರುವೆನು. ಇಂತಹ ದೀನನಿಗೆ ಕರಾವಲಂಬನವನ್ನಿತ್ತು ಉದ್ಧರಿಸು.

೩೧

ಹೇ ನಂಬಿದರ ಬೆಂಬಲಿಗನೇ ! ನಾನು " ಅಪರಾಧಿಯು, ಅವಿವೇಕಿಯು ಚಪಲಚಿತ್ತನು, ತುಂಬಾ ನೀಚಮತಿಯುಳ್ಳವನು " ಎಂದು ಹಲವು ಸಲ ಕೈಜಾಚಿ ಬೇಡುತ್ತಾ ನಿನ್ನ ಮರೆಹೋಗುತ್ತಿರುವೆನು. ನೀನು ಏತಕ್ಕೆ ನನ್ನ ಮೊರೆಯನ್ನು ಲಾಲಿಸುವುದಿಲ್ಲವೋ ತಿಳಿಯದು. ಕರುಣಾಕರನೇ, ಮತ್ತು ಜನನಮರಣ ರೂಪವಾದ ಈ ದುರ್ಗಮ ಸಂಸಾರದಲ್ಲಿ ನಾನು ಪ್ರವೇಶ ಮಾಡುವುದಿಲ್ಲವೋ ಅಂಥಹ ಕೆಲಸದಲ್ಲಿ ನನ್ನನ್ನು ನಿಯೋಜಿಸು.

೩೨

ಸರ್ಪಭೂಷಣಂ ! ನಿನ್ನ ಇಚ್ಛಾಕ್ರಿಯಾ ಜ್ಞಾನಾತ್ಮಕವಾದ ಅದ್ಭುತ ಶಕ್ತಿ, ಅಧೋಮಾಯೆ ಊರ್ಧ್ವಮಾಯೆ ಎಂಬೀ ದ್ವಿವಿಧ ಮಾಯೆಗಳ ಶುದ್ಧಾಶುದ್ಧ ಕಾರ್ಯಗಳನ್ನು ನಿರ್ವಹಿಸುವುದರಲ್ಲಿ ಸಮರ್ಥವಾಗಿ; (ಸ್ಥಿತಿಕೃತ್ಯ) ಸಕಲ ಕಾರ್ಯಗಳ ವಿಶೇಷಗಳನ್ನು ( ಪ್ರಸರಿಸುವುದು ) ಉಪಸಂಹರಿಸುವಂತದ್ದಾಗಿ (ಸಂಹಾರ ಕೃತ್ಯ) ಮೇಲಣ ಉಭಯ ಕಾರ್ಯಗಳನ್ನೆಲ್ಲವನ್ನು ಮಹಾ ಮಾಯೆಯೊಡನೆ ಹುಟ್ಟಿಸುವುದಕ್ಕಾಗಿ (ಸೃಷ್ಟಿಕೃತ್ಯ) ಸಂಸಾರ ಬಾಧೆಯನ್ನು ಭೋಗಾನುಭವದಿಂದ ನಿವಾರಿಸುವುದಾಗಿಯೂ (ತಿರೋಧಾನ ಕೃತ್ಯ) ಅಜ್ಞಾನಾಂಧಕಾರ (ಆಣವ ಮಾಯಾ ಕಾರ್ಮಿಕ ಮಲತ್ರಯ) ವನ್ನು ಶಿವ ದೀಕ್ಷಾ ಜ್ಞಾನದಿಂದ ಶಮನ ಮಾಡುವುದಾಗಿ (ಅನುಗ್ರಹ ಕೃತ್ಯ) ಸರ್ವ ಕಾಲದಲ್ಲಿಯೂ ಬೆಳಗುತ್ತಿರುವದಲ್ಲವೇ ?

ಛಿತ್ತ್ವಾ ಸಮಸ್ತಮಶುಭಂ ಭವಪಾಶರಾಶಿ-
ಮೀಷತ್ಪ್ರಕಾಶಮವಶಂ ಸ್ವಬಲಾಸಿನಾ ಮೇ ।
ತೇಜೋನಿಧಾನ ಮಮಲಂ ಭಗವನ್ ಪ್ರಯಚ್ಛ
ಸರ್ವಜ್ಞತಾಯುತಮಶೇಷಕರಂ ಶಿವತ್ವಂ || ೩೩ ||

ಬಾಲೋಽಪಿ ಸಂಸ್ಮರಣಮಾತ್ರ ಮಚೇತನಸ್ತೇ
ಲಿಂಗಂ ಕರೋತಿ ಹರ ಪಾಂಸುಮಯಂ ವಿನೋದಾತ್ ।
ಅತ್ಯಂತದೇಶಧನಧಾನ್ಯಸಮೃದ್ಧಿಭಾಜಿ
ರಾಜ್ಯಂ ಕರೋಷಿ ಹತಕಂಟಕ ಮನ್ನತಂ ಚ || ೩೪ ||

ಯೇ ಪಾಪಕರ್ಮ ಗುರುತಲ್ಪಗಹೇಮಚೋರ-
ಬ್ರಹ್ಮಘ್ನಗೋಘ್ನಚಪಲಾತುರಘಾತಕಾಶ್ಚ ।
ತೇ ನೀಲಕಂಠ ಪರಮೇಶ್ವರ ಪಾದಲಗ್ನ-
ನಿರ್ಧೌತ ಪಾಪ ಶಶಿನಿರ್ಮಲ ಶುದ್ಧದೇಹಾಃ || ೩೫ ||

ಯೇ ತ್ವಾಂ ವಿಭೋ ಸವನಕಾಲಸಕಲ್ಪಿತೇಷು
ಸಮ್ಯಗ್ಯಜಂತಿ ವಿವಿಧೇಷು ಶಿವವ್ರತೇಷು ।
ತೇ ಜಾತುರಂಗಘನಕುಂಕುಮಪಿಂಜರೇಷು
ವಿದ್ಯಾಧರೀಷು ವಿಲಸಂತಿ ಕುಚಾಂತರೇಷು || ೩೬ ||

೩೩

ಐಶ್ವರ್ಯನಿಲಯಾ ! ಜನನ, ಮರಣ, ಜರಾ, ವ್ಯಾಧಿ, ದುಃಖ, ಭೀತಿ, ಮೋಹ, ರಾಗ, ದ್ವೇಷಗಳಿಗೆ ಕಾರಣವಾಗಿ ಅಮಂಗಳಕರವಾದುದು, ಪರತಂತ್ರವಾದುದು, ಕಿಂಚಿಜ್ಞತ್ವಾದಿ ದೌರ್ಬಲ್ಯವುಳ್ಳದ್ದು ಆದ ನನ್ನ ಭವಬಂಧನವನ್ನು ಜ್ಞಾನಶಕ್ತಿರೂಪವಾದ ನಿನ್ನ ಖಡ್ಗದಿಂದ ಛೇದಿಸಿ ಚಿದಾನಂದಮಯವಾದ ಪರಿಶುದ್ಧವಾದ ಸರ್ವಜ್ಞತ್ವ ಸರ್ವ ಕರ್ತೃತ್ವಾದಿ ಮಹಿಮೆಗಳುಳ್ಳ ಶಿವತ್ವವನ್ನನುಗ್ರಹಿಸು.

೩೪

ಹೇ ಪುರಾರಿ ! ಆಗಮ ಶಾಸ್ತ್ರದಲ್ಲಿರುವ ಲಿಂಗಪ್ರತಿಷ್ಠಾ ವಿಧಾನವು ತಿಳಿಯದಿದ್ದರೂ, ಸುಮ್ಮನೆ ವಿನೋದವಾಗಿ ಮಳಲು ಮುಂತಾದವುಗಳಿಂದ ಬಾಲಕರು ಲಿಂಗವನ್ನು ಮಾಡಿದಮಾತ್ರದಿಂದಲೇ ನೀನು ತುಂಬಾ ತೃಪ್ತನಾಗಿ ಧನಧಾನ್ಯಗಳಿಂದ ಸಮೃದ್ಧಿಯಾಗಿರುವ ರಾಷ್ಟ್ರಕ್ಕೆ ಅವನನ್ನು ಸಾರ್ವಭೌಮನನ್ನಾಗಿ ಮಾಡುವುದಿಲ್ಲವೇ? ಇನ್ನೂ ಲಿಂಗಪ್ರತಿಷ್ಠೆ ಮಾಡುವವರ ಭಾಗ್ಯವನ್ನು ಕುರಿತು ಬೇರೆ ಹೇಳಬೇಕಾದುದೇನು ?

೩೫

ಭೋ ಶ್ರೀಕಂಠಾ ! ಅತಿ ಹೀನತರವಾದ ಗುರುತಲ್ಪಗಮನ ಬ್ರಹ್ಮಹತ್ಯ ಗೋಹತ್ಯ, ಭ್ರೂಣಹತ್ಯಾದಿಗಳೆಂಬ ಮಹಾ ಪಾತಕಗಳನ್ನು ಹಾಗೂ ಸ್ವರ್ಣ ಚೌರ್ಯ, ಜಾರತ್ವ, ದೇವ ದ್ರವ್ಯಾಪಹಾರಗಳು ಮುಂತಾದ ಉಪಪಾತಕಗಳನ್ನು ಮಾಡಿದವರು ನಿನ್ನ ಶ್ರೀಪಾದದಲ್ಲಿ ಸದಾ ಶರಣಾಗತರಾದರೆ ಸಮಸ್ತ ಪಾಪ ನಿವಾರಣೆಯಾಗಿ ಪರಿಶುದ್ಧರಾಗಿ ಚಂದ್ರನಂತೆ ಸತ್ಕಾರ ಪಾತ್ರರಾಗುವರು.

೩೬

ಸರ್ವಾಂತರ್ಯಾಮಿ ! ತ್ರಿಕಾಲಗಳಲ್ಲಿಯೂ ವಿವಿಧಂಗಳಾದ ಕೃಷ್ಣ ಚತುರ್ದಸಿ, ಶನಿಪ್ರದೋಷ, ಸೋಮವಾರಾದಿ ಶಿವವ್ರತಗಳಲ್ಲಿಯೂ ಭಕ್ತಿಯುಕ್ತರಾಗಿ ಶಾಸ್ತ್ರೋಕ್ತದಿಂದ ಯಾರು ನಿನ್ನನ್ನು ಪೂಜಿಸುವರೋ ಅವರು ಮಹಾ ವಿಲಾಸಿನಿಯರಾದ ವಿದ್ಯಾಧರ ಮಣಿಗಳ ಕರ್ಪೂರಾಗರು ಕಸ್ತೂರೀ ತಕ್ಕೋಲಗಳ ಸುಗಂಧದಿಂದ ವಿಶೇಷವಾಗಿ ವ್ಯಾಪ್ತವಾಗಿರುವ ವಕ್ಷೋಜಗಳ ಮಧ್ಯದಲ್ಲಿ ಸುಖವಾಗಿ ನಿವಾಸ ಮಾಡುತ್ತಾರೆ (ಸರ್ವ ಕಾಮಗಳೂ ಶಿವಪೂಜೆಯಿಂದ ಸಿದ್ಧಿಸುವುವೆಂಬ ಭಾವ ).

ಯತ್ಪ್ರದ್ಯತೇ ಕಮಲಯೋನಿರಭಿಷ್ಟುವಂ ಸ್ತ್ವಂ–
ಸಾಕ್ಷಾಚ್ಚತುರ್ಭಿರಧಿನಾಥಃ ಮುಖೈರ್ಭವಂತಂ ।
ತ್ಯಕ್ತ್ವಾ ವಯಂತು ಘನಸಂಸ್ತವನಕ್ರಿಯಾಸು
ಭಕ್ತಿಪ್ರಮಾಣಮಿತಿ ಸರ್ವಮಿದಂ ಕ್ಷಮಸ್ವ ॥ ೩೭ ॥

ಗಂಗಾತರಂಗಜಲಧೌತಜಟಾಕಲಾಪ
ಕಾಮಾಂಗದಗ್ಧ ಸಿತಭಸ್ಮವಿಭೂಷಿತಾಂಗ ।
ಚಂದ್ರಾರ್ಧ ಶೂಲಫಣಿರಾಜವಿರಾಜಿತಾಂಗ
ದೇವಾಧಿದೇವ ತವ ಪಾದಯುಗಂ ನಮಾಮಿ ॥ ೩೮ ॥

ಸ್ತೋತ್ರಂ ಮಯಾ ಕೃತಮಿದಂ ಭವತೋ ಗಣೇನ
ವೃತ್ತೈರ್ವಸಂತತಿಲಕೈ ಶ್ಶಿವ ಮಲ್ಹಣೇನ ।
ಅಯಾಸಮತ್ರ ಭಗವನ್ ಗದಿತಂ ದುರುಕ್ತಂ
ಭಕ್ತಿ ಪ್ರಮಾಣಮಿತಿ ಸರ್ವಮಿದಂಕ್ಷಮಸ್ವ * ॥ ೩೯ ॥

**ಇತಿ ಮಲ್ಹಣ ಸ್ತೋತ್ರಮ್ ಸಮಾಪ್ತಂ**

**ಮಂಗಲ ಮಹಾ ಶ್ರೀ ಶ್ರೀ ಶ್ರೀ**

---

* ಈ ಮಲ್ಹಣ ಸ್ತೋತ್ರವನ್ನು ಪಂಡಿತ ಚಿದರೆಮಠ ವೀರಭದ್ರಶರ್ಮರು ಸಂಪಾದಿಸಿ ಸಿಕಂದರಾಬಾದ್ ನಲ್ಲಿ ಕ್ರಿ. ಶ. ೧೯೪೩ರಲ್ಲಿ ಪ್ರಕಟಿಸಿದ "ಶಿವಪಂಚಸ್ತವಿ" ಎಂಬ ಗ್ರಂಥದಿಂದ ಉದ್ಧರಿಸಿದ್ದು.

೩೭

ಹೇ ಪ್ರಭೋ ! ನಿನ್ನಿಂದ ವಿಷ್ಣುವಿನ ನಾಭೀಕಮಲದಲ್ಲಿ ಸೃಷ್ಟಿಸಲ್ಪಟ್ಟ ಚತುರ್ಮುಖ ಬ್ರಹ್ಮದೇವನು ನಿನ್ನನ್ನು ಸರ್ವತೋಮುಖವಾಗಿ ಸ್ತುತಿಸುತ್ತಾ ನಿನ್ನನ್ನು ಪ್ರತ್ಯಕ್ಷವಾಗಿ ನೋಡಲು ಶಕ್ತನಾಗುತ್ತಾನೆ. ಆದರೆ ನಾನಾದರೊ ಒಂದೇ ನಾಲಿಗೆಯುಳ್ಳವನಾಗಿರುವುದರಿಂದ ಅಂಥಹ ನಿನ್ನ ಘನವಾದ ದಿವ್ಯ ರೂಪವನ್ನು ವಿವರಿಸುವ ಸ್ತೋತ್ರರಚನಾ ಕರ್ಮದಲ್ಲಿ ಅಸಮರ್ಥನಾಗಿ ಔದಾಸೀನ್ಯವನ್ನು ಹೊಂದಿದೆನು. ಇದೆಲ್ಲವೂ ಭಕ್ತಿಯಿಂದ ವಿರಚಿತವು. ಆದಕಾರಣ ನನ್ನ ದೌರ್ಬಲ್ಯಾದಿ ದೋಷಗಳನ್ನು ನಿನ್ನ ಅನುಗ್ರಹದಿಂದ ಕ್ಷಮಿಸು.

೩೮

ಹೇ ಮಂಗಳಕರನೇ ! ಗಂಗೋದಕಗಳಿಂದ ನಿರಂತರವು ಪ್ರಕ್ಷಾಳಿಕಂಗಳಾದ ಜಟಾಸಮೂಹಗಳನ್ನು ಧರಿಸಿದವನೇ, ಕಾಮನನ್ನು ಭಸ್ಮಮಾಡಿ ಅದರಿಂದ ದೇಹವನ್ನು ಶುಭ್ರವಾಗಿ ಅಲಂಕರಿಸಿದವನೇ ! ಅರ್ಧಚಂದ್ರ ತ್ರಿಶೂಲ ನಾಗಸರ್ಪ ಮುಂತಾದ ಭೂಷಣಗಳುಳ್ಳವನೇ ! ಎಲೈ ದೇವ ದೇವನೇ ಮಹಾದೇವನೇ ನಿನ್ನ ಶ್ರೀ ಚರಣಂಗಳಿಗೆರಗುವೆನು.

೩೯

ಎಲೈ ಪ್ರಣಯಜನ ಪ್ರಾಣಮಿತ್ರಾ ! ನಿನ್ನ ಭಕ್ತಗಣಗಳಲ್ಲಿ ಸೇರಿದ ಮಲ್ಲಣ ನಾಮಕನಾದ ನಾನು ವಸಂತತಿಲಕ ಛಂದಸ್ಸಿನಿಂದ ನಿನ್ನ ಸ್ತೋತ್ರವನ್ನು ರಚಿಸಿರುವೆನು. ಇದರಲ್ಲಿ ಶಬ್ದಗಳು ಅರ್ಥಗಳು ಭಾವಗಳು ಮುಂತಾದವುಗಳಿಗೆ ಸಂಬಂಧಿಸಿದ ದೋಷಗಳನ್ನು ಎಷ್ಟು ಪ್ರಯೋಗಿಸಿದೆನೋ ಕಷ್ಟಕರವಾಗಿ ಹೇಗೆ ನುಡಿದೆನೋ ನನಗೆ ತಿಳಿಯದು; ಇವುಗಳೆಲ್ಲವನ್ನು ಲೆಕ್ಕಿಸದೆ ಭಕ್ತಿಯಿಂದ ರಚಿಸಿರುವೆನಾದಕಾರಣ ನನ್ನನ್ನು ಕ್ಷಮಿಸಿ ಅನುಗ್ರಹಿಸು.

ವೇದಕಾವ್ಯ ಸ್ಮೃತಿತೀರ್ಥ, ವಿದ್ಯಾರತ್ನ ವಿದ್ಯಾನಿಧಿ
ಧರ್ಮಾಚಾರ್ಯ ಪಂಡಿತ ಚಿದರೆಮಠದ ವೀರಭದ್ರ ಶಾಸ್ತ್ರಿಗಳವರಿಂದ
ಆಂಧ್ರ ಭಾಷೆಯಲ್ಲಿ ರಚಿತವಾದ ಭಕ್ತರಂಜಿನಿ ವ್ಯಾಖ್ಯಾನವನ್ನು
ಬಳ್ಳಾರಿಯ ಉಭಯ ಭಾಷಾ ವಿದ್ವಾನ್
ಕವಿ ಶ್ರೀ ಕಪ್ಪಗಲ್ಲುಮಠದ ಕರಿಬಸವ
ಶಾಸ್ತ್ರಿಗಳವರು ಕನ್ನಡಿಸಿದರು.

—ಸಂಪಾದಕರು

# ಮಲುಹಣದೇವ ಚರಿತೆ

## ಕೆಲವು ಕಠಿಣ ಶಬ್ದಗಳ ಕೋಶ

ಸೂಚನೆ:— ಇಲ್ಲಿ ಸಂದರ್ಭ ಮತ್ತು ಶಬ್ದಗಳ ಜೋಡಣೆಯಿಂದ ಹೊರಡುವ ಅರ್ಥವನ್ನು ಮಾತ್ರ ಕೊಡಲಾಗಿದೆ

| ಶಬ್ದ | ಸ್ಥಲ | ಸಾಲು | ಅರ್ಥ |
|---|---|---|---|
| | | | **ಅ** |
| ಅಗ್ಗಣಿ<br>ಅಗ್ಘವಣಿ | ೩ | ೧೩೧ | ತೀರ್ಥಜಲ; ಶುದ್ಧೋದಕ, ನೀರು |
| ಅಂಗರುಚಿ | ೧ | ೧೨೫ | ಕಾಂತಿಯುತವಾದ ದೇಹ |
| ಅಂಗಲತೆ | ೧ | ೧೨೬ | ಬಳ್ಳಿಯಂತಿರುವ ಶರೀರ |
| ಅಂಗೈಸು | ೧ | ೧೨೧ | ಕೂಡು, ಸೇರು, ಹೊಂದು |
| ಅಟ್ಟಲೆ | ೧ | ೩೪ | ಮುಗಿಲೆತ್ತರದ ಗೋಡೆ |
| ಅಂಡಲೆವ | ೩ | ೮೨ | ಸಂಕಟಗೊಳಿಸುವ, ಪೀಡಿಸುವ, |
| ಅಣ್ಕೆಗೊಂಡ | ೨ | ೪೨ | ಲೇಪಿಸಿಕೊಂಡ |
| ಅಣ್ಣೆವಳಿಯದ | ೧ | ೧೭೦ | ಪಾವಿತ್ರ್ಯವು ಹೋಗದ, ಸೊಗಸಳಿಯದ |
| ಅಂಧತ್ವ | ೧ | ೧೬ | ಕತ್ತಲೆ, ಕುರುಡುತನ, ಅಜ್ಞಾನ |
| ಅಪರಭಾಗ | ೨ | ೧ | ದೇಹದ ಹಿಂಭಾಗ; ಬೆನ್ನಿನ ಭಾಗ |
| ಅಪ್ಪು | ೧ | ೧೧೧ | (೧)ಹೊಂದು, ಕೂಡು (೨) ನೀರು |
| ಅಪ್ರತಿಮ | ೧ | ೪೯ | ಸರಿಜೋಡಿಯಿಲ್ಲದ, ಶ್ರೇಷ್ಠನಾದ |
| ಅಮಳ್ವಕ್ಕಿ | ೧ | ೧೫೩ | ಚಕ್ರವಾಕಮಿಥುನ, ಜೋಡುವಕ್ಕಿ, |
| ಅಮರ್ಚಿ | ೨ | ೧೨ | ಅಲಂಕರಿಸಿ, ಜೋಡಿಸಿ |
| ಅಱಬುಗೊಂಡು<br>ಅಟಿಲುಗೊಂಡು | ೨ | ೧೦೩ | ನೀರಡಿಸಿ |

| | | | |
|---|---|---|---|
| ಅಱು | ೧ | ೧೭ | ತಿಳಿ |
| ಅಱುವಳಿದು | ೩ | ೯೩ | ಮುಂದುಗಾಣದೆ |
| ಅಳಕ | ೧ | ೧೭ | ಮುಂಗುರುಳು |
| ಅೞಲು | ೩(ಕಂದ) | ೩ | ವಿಯೋಗದದುಃಖ, ಸಂಕಟ Mental heat, affliction |
| ಅಳವಲ್ಲದ | ೩ | ೫೦ | ಅಳತೆಗೆ ಮೀರಿದ |
| ಅಳಿ | ೧ | ೧೬೭ | (೧) ತುಂಬಿ, ದುಂಬಿ (೨) ಕೆಟ್ಟ |
| ಅಳಿಯಾಸೆ | ೧ | ೨೪ | (೧) ತುಂಬಿಗಳ ಆಸೆ (೨) ದುಷ್ಟಹೇತು |
| ಅಳ್ಳಿರಿವ | ೧ | ೧೨ | ಚುಚ್ಚುವ, ತಿವಿವ, ಮುಟ್ಟುವ |
| ಅೞ್ಕಱಿಂ | ೩ | ೧೦೭ | ಪ್ರೀತಿಯಿಂದ, ಮಮತೆಯಿಂದ |
| ಅೞ್ಕು | ೧ | ೧೦೧ | ಸೊರಗು; ಕ್ಷೀಣವಾಗು |

## ಆ

| | | | |
|---|---|---|---|
| ಆಣತಿ | ೨ | ೫೧ | ಅಪ್ಪಣೆ; ಆಜ್ಞೆ |
| ಆತುರ | ೩ | ೩೬ | ಉತ್ಕಂಠತೆ, To feel desire |
| ಆದರಿಪ | ೧ | ೪೪ | ಪ್ರೀತಿ ವಿಶ್ವಾಸಗಳಿಂದ ಕೇಳಲ್ಪಡುವ |
| ಆರವೆ | ೧ | ೬೬ | ಆರಾಮ; ಪುರವನ; ತೋಟ |
| ಆವುಜ | ೨ | ೭೭ | ಒಂದು ವಿಧದ ವಾದ್ಯ |
| ಆಲೋಕನ | ೧ | ೧೪೬ | ನೋಟ |

## ಇ

| | | | |
|---|---|---|---|
| ಇಕ್ಷುಚಾಪ | | | ಕಬ್ಬಿನಬಿಲ್ಲು, ಕಾಮದೇವನ ಬಿಲ್ಲು |
| ಇಚ್ಛೈಸು | ೧ | ೧೫೩ | ಅಪೇಕ್ಷಿಸು, ಕೋರು |
| ಇಟ್ಟಣಿಸು | ೩ | ೬೬ | ಸಮೂಹಗೊಳ್ಳು, ಪರಂಪರೆಗೊಳ್ಳು |
| ಇತ್ತರಂಗೊಂಡು | ೨ | ೭೨ | ಎರಡುಸಾಲಾಗಿ, ಗುಂಪುಸೇರು, |
| ಇಂಬಿಲ್ಲದ | ೩ | ೪೬ | ತೆರಪಿಲ್ಲದ, ಅವಕಾಶವಿಲ್ಲದ |
| ಇಂಬುಗೊಳ್ | ೧ | ೧೪೪ | ಸುಖವಾಗಿ, ಸೊಗಸಾಗಿ ಮನೆಮಾಡು |
| ಇರವು | ೩ | ೧೯೩ | ಇರುವಿಕೆ |

## ಈ

ಈರೇಳು ೧ ೩೨ ಎರಡು × ಏಳು = ಹದಿನಾಲ್ಕು

## ಉ

ಉಡುಗಿ ೧ ೧೨೦ ಬಿಟ್ಟು

ಉಂಟೆನಿಸು ೧ ೧೫೫ ಅಸ್ತಿತ್ವವನ್ನು ತೋರಿಸು

ಉರವಣಿ ೧ ೧೨೦ ಅವಸರ, ಆತುರ, ಹೆಚ್ಚಾಗಿ

ಉರಸ್ಥಲ ೧(ಕಂದ) ೪ ಎದೆ; ವಕ್ಷ

ಉರಿವರಿವ ೩ ೯೬ ಉರಿಯುತ್ತಹರಿವ, ಉರಿವು+ಪರಿವ
Fluid fire in blast furnace

## ಎ

ಎಚ್ಚರಿಕೆಯೊತ್ತೊತ್ತಿ-ನೋಡ ೩ ೯೪ ಎಚ್ಚರಗೊಂಡಾಗಲೆಲ್ಲಾ

ಎಚ್ಚಿ ೨ ೧೮ ಅಂಜನಕ್ರಿಯೆ [ಇಲ್ಲಿ ಕಣ್ಣಿಗೆ ಕಾಡಿಗೆಯನ್ನು ಲೇಪಿಸಿಕೊಂಡು]
To smear, To decorate

ಎಡೆಗೊಂಡು ೩ ೪೪ ಮನೆಮಾಡಿಕೊಂಡು; ತುಂಬಿ

ಎಡೆಗೊಳ್ಳು ೧ ೧೪೧ ಸ್ಥಾನವನ್ನು ಕಲ್ಪಿಸಿಕೊಳ್ಳು

ಎಂತಕ್ಕೆ ೩ ೧೩೫ ಹೇಗಾದರೂ, ಹೇಗೋ

ಎಯ್ದು ೧ ೧೧೨ ಕೂಡು; ಬರು

ಎಳದಳಿರ್ ೧ ೧೯೬ ಎಳದು+ತಳಿರ್ = ಚಿಗುರೆಲೆ

ಎಳಸು ೧ ೧೧೬ ಆಸೆಪಡು, ಹಂಬಲಿಸು, ಅಪೇಕ್ಷಿಸು

## ಏ

ಏಱುಂಜವ್ವನ ೨ ೪೬ ಏರುತ್ತಿರುವ ಯೌವನ, ಹರೆಯ,

ಏರ್ಪಡೆ ೨ ಏಱು+ಪಡೆ= ಗಾಯಗೊಳ್ಳು

ಏಳ್ಗೆ ೨ (ಕಂದ) ೪ ಹೆಚ್ಚಳ, ಅಭಿವೃದ್ಧಿ

## ಒ

ಒಡರ್ಚು ೧ ೧೪೪ ಉಂಟುಮಾಡು

ಒತ್ತುಗೊಳ್ ೧ ೧೪೬ ಆಕ್ರಮಿಸು

| | | | |
|---|---|---|---|
| ಒರಲು | ೧ | ೧೦೪ | ಪ್ರಲಾಪಿಸು, ದುಃಖಪಡು |
| ಒಲವರಕೆ | ೨ | ೪೯ | ಪ್ರೀತಿಯ ಆಶೀರ್ವಾದ |
| ಒಲುಮೆ | ೩ | ೧೧೦ | ಪ್ರೇಮ, ಪ್ರೀತಿ |
| ಒಲೆವ | ೩ | ೮೨ | ಉಯ್ಯಾಲೆಯಾಡುವ To Swing |
| ಒಳಗೆಱಗಿ | ೩(ಕಂದ) | ೩ | ಹೃದಯದಲ್ಲಿ ನಾಟಿ, ತಾಗಿ |
| ಒಳಸಾರ್ದು | ೩ | ೨೪ | ಕಂಗೆಟ್ಟು, ಧೃತಿಗುಂದಿ |
| ಓಲೈಸು | ೧ | ೧೪೮ | ಆಶ್ರಯಿಸು, ಸೇವಿಸು |
| ಓವು | ೧ | ೮೩ | ಕಾಪಾಡು, ರಕ್ಷಿಸು |

**ಕ**

| | | | |
|---|---|---|---|
| ಕಕ್ಷಪುಟ | ೨ | ೪೨ | ಕೌಂಕುಳು [ಹಿಂ, ಬಗಲು] |
| ಕಚ | ೩ | ೧೪೧ | ತುರುಬು; ಮುಡಿ |
| ಕಜ್ಜಳ | ೨ | ೧೮ | ಕಾಡಿಗೆ |
| ಕಂಚುಕಿ | ೨ | ೧೫ | ಕುಪ್ಪಸ: ರವಕೆ [ಸಂ, ಕೂರ್ಪಾಸ] |
| ಕಟ್ಟಧಿಕ | ೧ | ೫೦ | ಕಡಿದು+ಅಧಿಕ= ಅತ್ಯಧಿಕ |
| ಕಡುನೇಹ | ೩ | ೨೨೫ | ಹೆಚ್ಚಾದ ಸ್ನೇಹ |
| ಕಡುವಿರಹ | ೩ | ೬೪ | ಕಡಿದು+ವಿರಹ= ಹೆಚ್ಚಾದ ವಿರಹ |
| ಕಣಕಾಲ್ | ೧ | ೧೬೨ | ಮೊಣಕಾಲಿನ ಕೆಳಭಾಗ |
| ಕಂಟಕ | ೧ | ೨೨ | (೧) ಮುಳ್ಳು (೨)ಕಿಡಗೇಡಿತನ, ಕೇಡು |
| ಕಂಪಿಸು | ೩ | ೬೪ | ನಡುಗು, unstudy |
| ಕರ | ೧ | ೨೩ | (೧) ಕೈ (೨) ಹೆಚ್ಚಾಗಿ (೩) ಕಿರಣ |
| ಕರಣ | ೩ | ೬೭ | ಅಂತಃಕರಣ; ಮನಸ್ಸು |
| ಕರುಮಾಡ | ೧ | ೪೬ | ಉಪ್ಪರಿಗೆ ಮನೆ |
| ಕರುವಿಟ್ಟಂತೆ | ೧ | ೧೨೮ | ಎರಕಹೊಯ್ದು ಮಾಡಿದಂತೆ |
| * ಕರ್ಣಾವತಂಸ | ೨ | ೧೪ | ಓಲೆ, ಕರ್ಣ+ಅವತಂಸ=ಕಿವಿಗೆ ಇಟ್ಟುಕೊಳ್ಳುವ ಆಭರಣ |
| ಕಳಾವಿದ | ೧ | ೪ | ಕುಶಲ ಕಲೆಗಳನ್ನು ಬಲ್ಲವ, ಲಲಿತ ವಿದ್ಯಾನಿಪುಣ |

* ಹೊನ್ನೋಲೆಯ ಚೆನ್ನೆ—ಮಹಾದೇವಿಯಕ್ಕನ ರಗಳೆ ಸ್ಥಲ ೨

| | | | |
|---|---|---|---|
| ಕಳಿಗುಂದಿ | ೩ | ೯೩ | ಸೊಪ್ಪಾಗಿ; ಸತ್ವವಳಿದು |
| ಕವಿಲು | ೩ | ೪೪ | ಬಡವಾಗು ನಿರಾಶನಾಗು |
| ಕಾಲ | ೧ | ೯೯ | ಯಮಧರ್ಮ, ಮೃತ್ಯು; ಸಾವು |
| ಕಾವೇಱು | ೩ | ೩೦ | ಕಾವು+ಏಱು= ಬಿಸಿಯಾಗು |
| ಕಿತ್ತೀಳೆ | ೧ | ೩೯ | ಕಿರಿದು+ಈಳೆ ಉದಾ:— ಕೊಡಗಿನ ಕಿತ್ತಳೆಹಣ್ಣು |
| ಕುಂಕುಮ | ೧ | ೩೭ | ಕುಂಕುಮ ಕೇಸರದ ಗಿಡ |
| ಕುೞಿ | ೩ | ೫೩ | ತಗ್ಗು (ಕುಣಿ) ಗುಣಿ |
| ಕೃತಕಾಚಲ | ೧ | ೧೫೯ | ಮಾಡುಬೆಟ್ಟ |
| ಕೆಯ್ | ೧ | ೧೭ | ಬೆಳೆ, ಬತ್ತದಗದ್ದೆ |
| ಕೇಳಿಸು | ೨ | ೭ | ವಿಲಾಸವಿಭ್ರಮದಿಂದ ತಾಲಬದ್ಧ ಲಾಸ್ಯ ಶಾಸ್ತ್ರಶುದ್ಧನಾಟ್ಯ ಪ್ರದರ್ಶನ, ಕ್ರೀಡೆ, ನರ್ತನ, |
| ಕೆಳೆಗೊಳ್ | ೧ | ೧೭೫ | ಸ್ನೇಹಮಾಡು |
| ಕೈಯ್ಗೆದಿತ್ತು | ೨ | ೧೧ | ಕೈಗೆ+ಎಯ್ದಿತ್ತು= ಶೃಂಗರಿಸಿತ್ತು ಕೈಯಲ್ಲಿ ಅಲಂಕರಿಸಿತ್ತು |
| ಕೈವಾರಮೊಡನೆ | ೨ | ೪೯ | ಹೊಗಳುವಿಕೆಯಿಂದ |
| ಕೊಯ್ | ೧ | ೧೭ | (೧)ಕೊಯಿಲುಮಾಡು (೨)ಹಾರಾಡುವ ಮುಂಗುರುಳನ್ನು ಸರಿಪಡಿಸು (೩) ಛೇದಿಸು |
| ಕೋಡು | ೩ | ೮೦ | ತಣ್ಣಗಾಗು |
| ಕೋವಿದ | ೧ | ೫೩ | ಬಲ್ಲವ, ಪರಿಣಿತ, ಜ್ಞಾನಿ |
| ಕಂಸಾಳ | ೨ | ೭೮ | ಕಂಚಿನತಾಳ [ಸಂ. ಕೌಂಸ್ಯ+ತಾಳ] |
| ಕ್ಷಣ | | | (೧) ಉದ್ಯೋಗ; ಆಮಂತ್ರಣ (೨) ಸಂತೋಷಚಿತ್ತ An auspicious or Lucky moment |

## ಗ

| | | | |
|---|---|---|---|
| ಗಜಘಟಿ | ೧ | ೫೧ | ಆನೆಯದಂಡು |
| ಗಂಡಸ್ಥಲ | ೧ | ೧೫೦ | ಕೆನ್ನೆ; ಕಪೋಲ |
| ಗಂಧವಹ | ೧ | ೧೫೧ | ಗಾಳಿ; ಸುಗಂಧಯುಕ್ತಗಾಳಿ |
| ಗಮಕ | ೧ | ೧೨೦ | ಗಾಂಭೀರ್ಯ; ಸೊಗಸು, ಠೀವಿ |
| ಗರುವ | ೩ | ೧೪೩ | ಪೂಜ್ಯ, ವಂದ್ಯ |
| ಗವಸಣಿಗೆ | ೨ | ೧೫ | ಮುಚ್ಚಳ; ಹೊದಿಕೆ |
| ಗೀತ ವಾದ್ಯ ನೃತ್ಯತ್ರಯ | ೧ | ೫೪ | ಹಾಡುಗಾರಿಕೆ ಬಾಜನೆ ನೃತ್ಯಗಳಿಂದ ಕೂಡಿದ ಸಂಗೀತ |
| ಗುಣ್ಪು | ೧ | ೧೫೬ | ಆಳ |
| ಗೊಲೆಗೆತ್ತು(ಗೇರಿಸು) | ೨ | ೨೯ | ಹೆದೆಯೇರಿಸು |

## ಚ

| | | | |
|---|---|---|---|
| ಚಂಚು | ೧ | ೧೬೯ | ಕೊಕ್ಕು |
| ಚಾರುತರ | ೧ | ೪ | ಬಹು ಸೊಗಸಾದ; ಅಂದವಾದ |
| ಚಿತ್ರತರಂ | ೨(ಕಂದ) | ೪ | ಸೋಜಿಗ, ಕಣ್ಣಿಗೆ ಮೋಹಕ |
| ಚೆಚ್ಚರಂ | ೩ | ೧೫೮ | ಒಡನೆ; ಕೂಡಲೆ, ಈಗಿಂದೀಗಲೇ quickly, at once, forthwith |

## ಜ

| | | | |
|---|---|---|---|
| ಜವನಿಕೆ | ೨ | ೮೩ | ಪರಪೆ, ತೆರೆ, [ಸಂ. ಯವನಿಕಾ] |
| ಜವಳಿ | ೨ | ೯೬ | ಜೊತೆ, ಜೋಡು |
| ಜವ್ವನ | ೨ | ೮೬ | ಯೌವನ, ಹರೆಯ, ಪ್ರಾಯ |
| ಜೋಳಿಸು | ೨ | ೫೦ | ಜೋಡಿಸು; ಹೊಂದಿಸು |

## ತ

| | | | |
|---|---|---|---|
| ತಟಾಕ | ೧ | ೫ | ಹೊಕ್ಕರಣೆ; ಹೊಂಡ |
| ತನತನಗೆ | ೩ | ೧೮ | ತನ್ನಷ್ಟಕ್ಕೆ ತಾನೇ |
| ತನಿನೇಹ | ೩ | ೧೧೮ | ಪರಿಪೂರ್ಣ ಪಕ್ವಗೊಂಡ ಸ್ನೇಹ |
| ತನುರುಚಿ | ೧ | ೧೨೧ | ದೇಹಕಾಂತಿ, ಸೊಬಗಿನ ಮೈ |

| | | | |
|---|---|---|---|
| ತರಣಿ | ೧ | ೨೩ | ಸೂರ್ಯ |
| ತರತರಂಗೊಂಡು | ೩ | ೧೩೧ | ಸಾಲುಸಾಲಾಗಿ |
| ತಳಿ | ೨ | ೧೦೫ | ಚಿಮುಕಿಸು; ಸಿಂಪಡಿಸು |
| ತಳಿರೊತ್ತಿ | ೧ | ೧೪೧ | ಚಿಗುರಿನಿಂದ ತುಂಬಿ |
| ತೀವಿದ | ೧ | ೮೩ | ತುಂಬಿದ |
| ತುಡುಂಕದ | ೧ | ೧೬೭ | ದುಡುಕದ, ಎರಗದ |
| ತುರುಂಬು | ೨ | ೨೩ | ಮುಡಿ; ಮುಡಿಸು |
| ತೂಪಿರಿ | ೧ | ೧೭೫ | ದೃಷ್ಟಿತೆಗೆ, ನಿವಾಳಿಸು |
| ತೂರ್ಯತ್ರಯ | ೩ | ೧೨೫ | ಹಾಡು ನರ್ತನ ವಾದ್ಯ |
| ತೆಱಹು | ೩ | ೧೦೩ | ಎಡೆ; ಸ್ಥಾನ, ಇಂಬು |
| ತೊತ್ತಳಂದುಳಿ | ೨ | ೮೫ | ಮುದ್ದೆಮಾಡು; ಹರಣಮಾಡು |
| ತೋಟಿ | ೧ | ೧೧೬ | ಜಗಳ; ತಿಕ್ಕಾಟ, ಹೋರಾಟ |
| ತೋರಮುತ್ತು | ೨ | ೧೬ | ದೊಡ್ಡಮುತ್ತು; ಆಣಿಮುತ್ತು |

## ದ

| | | | |
|---|---|---|---|
| ದಾನ | ೧ | ೨೬ | ತ್ಯಾಗ; ಆನೆಯ ಮದಧಾರೆ |
| *ದಾಪನ | ೨ | ೫೮ | ದಾಹನ; ದಹಿಸುವುದು: ಸುಡುವುದು; |
| ದಾವಾಗ್ನಿ | ೩ | ೨೩ | ಕಾಡುಕಿಚ್ಚು |
| ದಿಟ್ಟಿಸು | ೩ | ೭೭ | ದೃಷ್ಟಿಸು, ಕಣ್ಣಿಟ್ಟುನೋಡು |
| ದುಕೂಲ | ೨ | ೧೯ | ರೇಶ್ಮೆಸೀರೆ |
| ದೂಱಿಸುತೆ | ೩ | ೪೫ | ಹಲುಬುತ್ತ |
| ದೆಖ್ಖಾಳಂಗುಡು | ೨ | ೭೭ | ಶೋಭೆಗೊಡು |
| ದೇವಮಾತೃಕ | ೨ | ೯ | ಮಳೆಯಿಂದ ಬೆಳೆಯುವ ಭೂಮಿ |
| ದೈವಜ್ಞ | ೧ | ೭೬ | ಬ್ರಹ್ಮವನ್ನು ಬಲ್ಲವಂ, ಬ್ರಹ್ಮಜ್ಞಾನಿ |

---

* ವಾಸ್ತುಶಿಲ್ಪಶಾಸ್ತ್ರದಲ್ಲಿ ದೇವಾಲಯ ಮುಂತಾದ ಕಟ್ಟಡ ಕಟ್ಟುವುದಕ್ಕೆ ಮೊದಲು ಆ ಭೂಮಿಯನ್ನು ಸೋಸುವುದು ಸುಡುವುದು ನೀರು ಹಾಕುವುದಕ್ಕೆ ದಾವನ ಶೋಷಣ ಪ್ಲಾವನಗಳೆಂದು ಹೆಸರು

| | | | |
|---|---|---|---|
| ದೊಣೆ | ೧ | ೧೬೨ | ಬತ್ತಳಿಕೆ |
| ದ್ರುಮ | ೧ | ೪೧ | ಗಿಡ, ಮರ |

**ನ**

| | | | |
|---|---|---|---|
| ನದೀಮಾತೃಕ | ೧ | ೯ | ನದಿಯ ನೀರಿ (ಕಾಲುವೆ) ನಿಂದ ಬೆಳೆಯುವ ಭೂಮಿ |
| ನನೆಗಣೆ | ೨ | ೫ | ಹೂವಿನಬಾಣ; ಕಾಮನಬಾಣ |
| ನಲಿವುತುಂ | ೧ | ೮೪ | ಸಂತೋಷಪಡುತ್ತ |
| ನಲ್ಲರ್ | ೧ | ೬೨ | ಸ್ನೇಹಿತರು, ಗೆಳೆಯರು |
| ನಲಾಮ್ರ | ೧ | ೪೦ | ಎಳಮಾವು |
| ನಾಲ್ಕೈದವಸ್ಥೆ | ೩ | ೨೯ | ನಾಲ್ಕು+ಐದು=ಒಂಬತ್ತನೆಯಗತಿ ಮೂರ್ಛೆಹೊಂದುವುದು, ವಿರಹದ ಒಂಭತ್ತನೆಯ ಸ್ಥಿತಿ |
| ನಾಳಿಕೇರ | ೧ | ೪೦ | =ನಾರಿಕೇಳ, ತೆಂಗು |
| ನಿಟ್ಟೆ | ೩ | ೧೬೦ | ನಿಷ್ಠೆ ಭಕ್ತಿ |
| ನಿಮಿರ್ಚು | ೨ | ೬೧ | ಮಾಡು |
| ನಿಃಸ್ವರ | ೨ | ೧೮೧ | ಧನಹೀನ |
| ನೆಗೆದು | ೩ | ೬೭ | ಮೇಲೇರಿ; ಹೆಚ್ಚಾಗಿ |
| ನೆಮ್ಮು | ೩ | ೪೫ | ಒರಗು; ಆಧರಿಸು |
| ನೆರೆ | ೧ | ೪೬ | ಅಂತಸ್ತು |
| ನೆಱೆ | ೩ | ೧೮೦ | ಹೆಚ್ಚಾಗಿ, ಫರಿಪೂರ್ಣವಾಗಿ |
| ನೇವುರ | ೨ | ೧೨ | ಒಡ್ಯಾಣ; ನೇವಾಳ |
| ನೇಹ | ೧ | ೧೭೭ | ಸ್ನೇಹ, ಗೆಳೆತನ |
| ನೋಡಬಾರದ | ೩ | ೧೧೬ | ನೋಡಿದರೆ ಕಷ್ಟವೆನಿಸುವ |
| ನೋವುತುಂ | ೩ | ೨ | ನೊಂದುಕೊಳ್ಳುತ್ತಾ |

**ಪ**

| | | | |
|---|---|---|---|
| ಪಂಚಧಾರ | ೩ | ೧೩೩ | ತವರಾಜ (ಒಂದು ವಿಧದ ಸಕ್ಕರೆ) |
| ಪದತಲ | ೧ | ೧೬೩ | ಅಂಗಾಲು |

| | | | |
|---|---|---|---|
| ಪದುಳ | ೧ | ೯೮ | ಸಂತೋಷ, ಆನಂದ |
| ಪದೆದು | ೩ | ೫೮ | ಸಂತೋಷಗೊಂಡು |
| ಪರಿಚ್ಛೇದಿಸು | ೩ | ೯೨ | ನಿರ್ವೇಗಗೊಳ್ಳು |
| ಪರಿಣತಂ | ೧ | ೧೦೯ | ಪಳಗಿದವ, ಒಗ್ಗಿದವ |
| ಪರಿವರಿವ | ೧ | ೧೦ | ಪರಿವ+ಪರಿವ=ತುಂಬಿಹರಿಯುವ ಹೆಚ್ಚಾಗಿ (ಯಾವಾಗಲೂ) ಹರಿಯುವ |
| ಪರ್ಬುಗೆ | ೨ | ೪೫ | ಹೆಚ್ಚಳ; ಹರಿಯುವಿಕೆ |
| ಪಸಿಯಕಂಪು | ೨ | ೩೧ | ಹೊಸ ಸುಗಂಧ |
| ಪಸಿಯಕಿಚ್ಚು | ೩ | ೨೬ | ಹಸಿರಾಗಿ ಕಾಣುವ ಬೆಂಕಿ |
| ಪಾವಕ | ೩ | ೭೫ | ಅಗ್ನಿ, ಸುಡುವಕೆಂಡ |
| ಪುರಾಣಪ್ರಸಂಗ | ೧ | ೪೩ | ಪುರಾಣಕಥೆ (ಹೋ) ಯಕ್ಷಗಾನಪ್ರಸಂಗ |
| ಫುಲ್ಲಶರ | ೨ | ೩೦ | ಕಾಮ, ಹೂಬಾಣಉಳ್ಳವನು |
| ಪುಷ್ಪಚಾಪ | ೧ | ೧೧೨ | ಹೂವಿನಬಿಲ್ಲು, ನೆನೆಯಂಬು |
| ಪೂರಯಿಸು | ೩ | ೬೦ | ತುಂಬು, ಹೊಗು |
| ಪೆಱೆ | ೩ | ೧೪೪ | ಚಂದ್ರ, ಶಶಿ |
| ಪೈಸರಂಬೋಗು | ೨ | ೮೮ | ಹೆಚ್ಚೆತಪ್ಪು; ತಾಳತಪ್ಪು |
| ಪೊಣ್ಮು = ಹೊಮ್ಮು | ೩ | ೪೭ | ಉಕ್ಕು; ತುಂಬಿ |
| ಪೊರವೊಳಲು | ೩ | ೧೭ | (ಪೊಳಲ+ಪೊರಗು) ಊರಹೊರಗಿನ ಭಾಗ |

## ಬ

| | | | |
|---|---|---|---|
| ಬಟ್ಟಿದೊಡೆ | ೧ | ೧೬೧ | ಬಟ್ಟಿತು+ತೊಡೆ= ದುಂಡಗಾದ ತೊಡೆ |
| ಬಡತನ | ೧ | ೧೯ | (೧) ದಾರಿದ್ರ್ಯ (೨) ಕೃಶತ್ವ |
| ಬಂಧನ | ೧ | ೧೫ | (೧) ಕಟ್ಟುವಿಕೆ (೨) ಸೆರೆಹಿಡಿಯುವಿಕೆ |
| ಬಂಧುರ | ೧ | ೧೫೨ | ಚೆಂದವಾದ, ಮನೋಹರವಾದ |
| ಬರ್ದು | ೩ | ೧೬೧ | ಬದುಕಿ |
| ಬಲವರ್ಪ | ೩ | ೧೨೬ | ಪ್ರದಕ್ಷಿಣೆಹಾಕುವ |
| ಬಟಿಲು | ೩ | ೪೩ | ಜೋಲು |

| | | | |
|---|---|---|---|
| ಬಾಸಣಿಸು | ೧ | ೧೫೪ | ಶೋಭೆಗೊಡು, ಅಲಂಕರಿಸು |
| ಬಾಹುಪೂರ | ೨ | ೧೪ | ಬಾಪುರಿ, ನಾಗಮುರಿ ಆಭರಣ |
| ಬಿನದದಿಂ | ೧ | ೮ | ವಿನೋದದಿಂದ, ಸಂತೋಷದಿಂದ |
| ಬಿಂಬಫಳ | ೩ | ೨೨ | ತೊಂಡೆಹಣ್ಣು |
| ಬಿರಿಮುಗುಳ್ | ೧ | ೧೬೭ | ಅರಳುತ್ತಿರುವ (ಹೂ) ಮೊಗ್ಗೆ |
| ಬೀದಿವರಿ | ೨ | ೪೫ | ಮುಂದಾಗು; ಹಾದಿಹಿಡಿ |
| ಬೆಚ್ಚಿ | ೩ | ೯೫ | ಬೆದರಿ |
| ಬೇಡಗಿಚ್ಚು | ೨ | ೧೪೯ | ಭೀತಿಚಿತ್ತದಿಂದ ಅಥವಾ ಹೀನ ಮನಸ್ಸಿನಿಂದ ಹೊರಹೊಮ್ಮಿದ ಬೆಂಕಿ |
| ಬೇವುತುಂ | ೩ | ೧ | ಉರಿಯುತ್ತಾ; ಸಂಕಟಗೊಳ್ಳುತ್ತಾ |

**ಭ**

| | | | |
|---|---|---|---|
| ಭರಭಾರ | ೧ | ೧೦೭ | ಎಲ್ಲ ಹೊಣೆ, ಹೆಚ್ಚಾದ ಭಾರ |
| ಭಾವದಚ್ಚಳಿಯೆ | ೩ | ೧೬ | ಭಾವದ ಬಿಸುಗೆ ಬಿಡಲು |
| ಭಿತ್ತಿ | ೩ | ೪೫ | ಗೋಡೆ |
| ಭುವನ | ೧ | ೨೨ | (೧) ಲೋಕ (೨) ನೀರು |
| ಭ್ರೂ | ೧ | ೧೪೫ | ಹುಬ್ಬು |

**ಮ**

| | | | |
|---|---|---|---|
| ಮಡಿ | ೧ | ೩೭ | ಗಿಡಗಳನ್ನು ಬೆಳೆಸುವ ಪಾತಿ |
| ಮಧು | ೧ | ೧೪೩ | ವಸಂತ; ಸವಿ; ಜೇನು |
| ಮಧುರಾಂಶು | ೩ | ೧೪೪ | ಅಮೃತಕಿರಣ, ಚಂದ್ರ |
| ಮನದರ್ಥ | ೨ | ೧೦೫ | ಮನಸ್ಸಿನ ಬಯಕೆ |
| ಮನನೊಂದು | ೩ | ೯೩ | ದುಃಖಿಸಿ, ಮರುಗಿ |
| ಮನವನಪ್ಪುವಂ | ೧ | ೭೦ | ಮನಸ್ಸಿಗೆ ಹಿತನೆನಿಸುವನು |
| ಮನೋರಥರೂಪ | ೩ | ೧೩೯ | ರೂಪದರ್ಶನದಿಂದ ಇಷ್ಟಾರ್ಥವನ್ನು ಕೊಡುವ |
| ಮಂದಿವಾಳ[ತನ] | ೨ | ೧೦೦ | ಅತಿಸಲುಗೆ, ಕೂವಾಡ ಮಾಡುವಿಕೆ |
| ಮಂದ್ಯೆಸಿ | ೩ | ೭೦ | ದಟ್ಟನಾಗಿ |

| | | | |
|---|---|---|---|
| ಮುಱಿಮೊನೆಗಂಡಂತೆ | ೩(ಕಂದ) | ೧ | ಮುರುಕಳಿಸಿದಂತೆ [ ಇಲ್ಲಿ ತಿರುಗಿ ಹದನಾದಂತೆ ] |
| ಮಯ್ಗಿ | ೩ | ೯೦ | ನಾಶಹೊಂದು |
| ಮಾಟ | ೧ | ೧೨ | (೧) ಮನೆ (೨) ಸೌಧ |
| ಮಾತುಳಂಗ | ೧ | ೩೦ | ಮಾದಲ, ಮಾದಳದ ಹಣ್ಣು |
| ಮಾಸಿಸರ | ೧ | ೮೬ | ಮನುಷ್ಯರ |
| ಮಿಗೆ | ೩(ಕಂದ) | ೨ | ಹೆಚ್ಚಾಗಲು; ಅಧಿಕವಾಗಲು |
| ಮಿಥುನ | ೧ | ೪೨ | ಗಂಡುಹೆಣ್ಣು ಜೋಡಿ |
| ಮುಕುರ | ೧ | ೧ | ಕನ್ನಡಿ, ದರ್ಪಣ |
| ಮುಪ್ಪುರಿಗೊಳ್ಳು | ೨ | ೪೫ | ಮೂರುಹುರಿಬಟ್ಟಾಗು, ಗಟ್ಟಿಯಾಗು |
| ಮುರುಂಟು | ೩ | ೬೯ | ಮುರುಟು; ಒಳಕ್ಕೆ ಹುದುಗಿಕೊಳ್ಳು |
| ಮುಷಿತ | ೩ | ೨೩೮ | ಸುಡಲ್ಪಟ್ಟ; ದಹಿಸಿದ |
| ಮುಸುಱು | ೩ | ೩೬ | ಸುತ್ತುಗೊಂಡು; ಮುಸುಕಿ |
| ಮೃಣಾಲ | ೧ | ೧೫೨ | ಕಮಲದದೇಟು (ನಾಳ) |
| ಮೈದಂದರ್ | ೩ | ೨೨೬ | ಮೈಗೊಟ್ಟವರು |
| ಮೈಯಿಕ್ಕು | ೩ | ೧೬೯ | ನಮಸ್ಕಾರಮಾಡು |
| ಮೈಸಂದು | ೨ | ೧೦೧ | ಮೈಯುಂಡು; ಮೈಗೂಡಿ |
| ಮೊಗವಿಡದ | ೧ | ೧೬೮ | ಬಾಯಿಹಚ್ಚದ, ಇನ್ನೂರುಚಿನೋಡದ |
| ಮೊಗೆ | ೩ | ೧೦೦ | ತುಂಬಿ ತೆಗೆ |

**ಯ**

| | | | |
|---|---|---|---|
| *ಯಕ್ಷಕರ್ದಮ | ೨ | ೩೦ | ಮೈಗೆಹಚ್ಚಿಕೊಳ್ಳುವ ಸುಗಂಧದ್ರವ್ಯ |

**ರ**

| | | | |
|---|---|---|---|
| ರಂಗ | ೨ | ೩೮ | ರಂಗಭೂಮಿ; ನಾಟ್ಯರಂಗ |
| ರಂಗವಾಲಿ | ೩ | ೧೨೪ | ರಂಗವಲ್ಲಿ |
| ರಂಜಿಸು | ೧ | ೧೩ | ಪ್ರಕಾಶಿಸು |

---

* ಕಸ್ತೂರಿ, ಕರ್ಪೂರ, ಅಗರು ಮುಂತಾದ ಸುವಾಸಿಕ ದ್ರವ್ಯಗಳನ್ನು ಕೂಡಿಸಿ ಮಾಡಿದ ಒಂದು ತರದ ಪರಿಮಳದ ಅನುಲೇಪನ.

| | | | |
|---|---|---|---|
| ರಾಗ | ೨ | ೧೧೧ | ಪ್ರೀತಿ, ಕಾಂತಿ, ಸಂತೋಷ, ಸ್ನೇಹ |
| ರಾಜಭೂಷಣ | ೧ | ೯೮ | ಚಂದ್ರಶೇಖರ; ಶಶಿಮೌಳಿ |
| | | | **ಲ** |
| ಲಸಿತ | ೧(ಕಂದ) | | ಶೋಭಿಸುವ |
| ಲಹಣಿ | | | ತಾಳ; ಸ್ವರಸಮ್ಮೇಳನ ಸಂಗೀತದಿಂದ ಕೂಡಿದ ನೃತ್ಯ, ಲಹರಿ, ಅಲೆ |
| ಲಾಸ್ಯ | ೧ | ೧೭೭ | ಶೃಂಗಾರವನ್ನು ಸೂಚಿಸುವ ನರ್ತನ ನೃತ್ಯಕಲೆ, ನಾಟ್ಯ |
| ಲಾಸಮಂ ಕೇಳಿಸು | ೨ | ೩೮ | ನೃತ್ಯಪ್ರದರ್ಶನ [ನೋ: ರಂಭೆಕೇಳಿಕುಂ ಪೆಕ್ಕಣಮಂ] |
| | | | **ವ** |
| ವೃದ್ಧವ್ಯವಹಾರಿ | ೨ | ೭೩ | ವೃದ್ಧವ್ಯವಹಾರಿ; ಲೋಕಾನುಭವವುಳ್ಳ ಮಹಾಜನರು |
| ವಸನ | ೧ | ೧೧೮ | ಬಟ್ಟೆಬರೆ, ಉಡುಪು |
| ವಸಂತವಿಳಾಸಿನಿ | ೨ | ೧೧ | ವಸಂತಲಕ್ಷ್ಮೀ |
| ವಸುಮತಿ | ೧ | ೧ | ಭೂಮಿ |
| ವಾರಿಧಿ | ೧(ಕಂಡ) | | ಸಮುದ್ರ; ಕಡಲು |
| ವಿರೂಪಾಕ್ಷ | ೩(ಕಂದ) | ೨ | ವಿರೂಪವಾದ ಕಣ್ಣುಗಳುಳ್ಳವ ಮುಕ್ಕಣ್ಣ, ಸದಾಶಿವ |
| ವಂಶ | ೧ | ೨೦ | (೧) ಬಿದಿರು (೨) ಮನೆತನ(೩) ನೀರು |
| | | | **ಶ** |
| ಶಿರಃಕಂಜ | ೩ | ೧೯೫ | ಶಿರಸ್ಸೆಂಬ ಕಮಲ |
| ಶಿಶಿರೋಪಚಾರ | ೩ | ೮೧ | ಬಿಸಿಲು ಅಥವಾ ಕಾಮದಾಹದಿಂದ ಬಳಲಿದವರಿಗೆ ಮಾಡುವ ಉಪಚಾರ |
| | | | **ಸ** |
| ಸತ್ಯಸಾಹಿತ್ಯ | ೧ | ೫೬ | ಸುಜ್ಞಾನಸಾಹಿತ್ಯ; ಪರಮಾರ್ಥಜ್ಞಾನ |
| ಸದಮಳ | ೩ | ೧೪೦ | ನಿರ್ಮಲ, ಪವಿತ್ರ |
| ಸಂದಣಿ | ೩ | ೭೦ | ಸಮೂಹ, ಗುಂಪು |
| ಸಪುರ | ೨ | ೨೪ | ತೆಳ್ಳಗಿನ |

| | | | |
|---|---|---|---|
| ಸಮೆದ | ೩ | ೧೨೪ | ರಚಿಸಿದ |
| ಸಂಭ್ರಮ | ೩ | ೧೩೫ | ಗದ್ದಲ, ಸಡಗರದ ಸಂತೋಷ |
| ಸರಸಿಜಶ್ರೀ | ೧ | ೧೪೮ | ಕಮಲದ ಸೊಬಗು |
| ಸಲ್ | ೧ | ೧೨೩ | ಅರ್ಹತೆಪಡೆ; ಹೊಂದಿಕೊಳ್ಳು |
| ಸಾರ್ದ | ೧ | ೬೪ | ಅವಲಂಬಿಸಿಕೊಂಡಿರುವ |
| ಸಾಲಿಡು | ೨ | ೩೫ | ಅನುಗೊಳಿಸು ಹೊಂದಿಸು |
| ಸೂಡಗ | ೨ | ೧೨ | ಚೂಡಗ; ಕಡಗ |
| ಸೂರ್ಯವೀಥಿ | ೧ | ೪೭ | ಪೂರ್ವ-ಪಶ್ಚಿಮವಾಗಿದ್ದು ಮರೆಯಿಲ್ಲದೆ ಬಿಸಿಲು ಬೀಳುತ್ತಿರುವ ಬೀದಿ |
| ಸೋಮವೀಥಿ | ೧ | ೪೭ | ದಕ್ಷಿಣೋತ್ತರಬೀದಿ ಮನೆಗಳ ನೆರಳಿಂದ ತಂಪಾಗಿರುವ ಬೀದಿ |
| ಸೇರಿಸು | ೩ | ೧೫೦ | ಆರೋಪಿಸು, ಹೊಂದಿಸು |
| ಸಂವರಣೆ | ೨ | ೭೮ | (ದ್ಭ: ಸಂಭರಣ) ಸಜ್ಜು ಒಟ್ಟುಗೂಡಿಸು |
| ಸಸ್ವರ | ೨ | ೧೮೨ | ಧನಿಕ, ಶ್ರೀಮಂತ, ಹಣವುಳ್ಳವ |
| ಸ್ವನಂಗಳ್ | | | ಶಬ್ದಗಳು |

**ಹ**

| | | | |
|---|---|---|---|
| ಹಮ್ಮೈದ | ೨ | ೧೧೭ | ಮೂರ್ಛೆ |
| ಹಮ್ಮೈಸು | ೨ | ೧೪೬ | ಮೂರ್ಛೆಹೋಗು, ಎಚ್ಚರದಪ್ಪು |
| ಹಾರೈ | ೩ | ೪೬ | ನಿರೀಕ್ಷಿಸು; ಆಶಿಸು |
| ಹಿಮದೊಟ್ಟಿಲ್ | ೩ | ೮೭ | ಹಿಮದರಾಶಿ, ಮಂಜಿನ |
| ಹೆಚ್ಚು | ೩ | ೧೪ | ಸಂತೋಷಪಡು; ಉಬ್ಬು |
| ಹೆಱಸಾರ್ದು | ೨ | ೨೩ | ಹಿಂದಕ್ಕೆ ಸರಿದು; ಬೆಚ್ಚಿ |
| ಹೇಡೈಸು | ೩ | ೨೫ | ಅಳುಕು; ಹೇಡಿಯಾಗು |
| ಹೇರೀಳೆ | ೧ | ೩೯ | ಪಿರಿದು+ಈಳೆ An Orange ಉದಾ:—ಕಾಶ್ಮೀರದ ಕಿತ್ತಳೆಹಣ್ಣು |
| ಹೊಡೆಗೆಡೆ | ೨(ಕಂದ) | | ಹೊಟ್ಟೆನೆಲಕ್ಕೆಮುಟ್ಟುವಂತೆ ಅಡ್ಡಬೀಳು ಶಿರಸಾಷ್ಟಾಂಗ ನಮಸ್ಕಾರ ಮಾಡು |
| ಹೊಯ್‌ಕೆಯ್ | ೧ | ೫೬ | ಸರಿಜೋಡಿ; ಜೊತೆ, ಸಮಬಲ |

# ಟಿಪ್ಪಣಿ

## ಗಱಗಱನೆ ನಾಲ್ಕೈದವಸ್ಥೆ ದೇಹದೊಳೇೞೆ *

—[೩ನೆಯ ಸ್ಥಲ— ೪ನೆಯ ಸಾಲು

ನಾಲ್ಕೈದವಸ್ಥೆಗಳು ಯಾವವು ?

**ಅಭಿಲಾಷ-ಚಿಂತಾ-ಸ್ಮೃತಿ-ಗುಣಕೀರ್ತನ-ಉದ್ವೇಗ-ಪ್ರಲಾಪ-ವ್ಯಾಧಿ, ಜಡತಾಮರಣಾಖ್ಯಾಃ ದಶಾವಸ್ಥಾಃ ||**

—[ವಾಗ್ಭಟ : ಕಾವ್ಯಾನುಶಾಸನ, ಪುಟ ೬೪

೧. ನೋಡುತ್ತ ಇದ್ದರೆ ಪರಸ್ಪರ ಪ್ರೀತಿ ಅಭಿಲಾಷೆ ಬೆಳೆಯುವುದು;

೨. ಅಭಿಲಾಷೆ ಹೆಚ್ಚಿದರೆ ಚಿತ್ತವು ಆಸಕ್ತಿಹೊಂದಿ ಚಿಂತಿಸುವುದು;

೩. ಚಿಂತಿಸುವುದು ವರ್ಧಿಸಿದರೆ ಮನಸ್ಸಿನಲ್ಲಿ ನೆನಪು ( ನಿಶ್ಚಯ ) ಮಾಡಿಕೊಂಡು ತನ್ನ ಸ್ವಾಧೀನ ಮಾಡಿಕೊಳ್ಳಬೇಕೆಂದು ಸಂಕಲ್ಪ ಮಾಡುವುದು;

೪. ಸಂಕಲ್ಪಮಾಡಿದ ಮೇಲೆ ಹೊರಗಿನ ( ಬಾಹ್ಯಪ್ರಪಂಚದ ) ಸಂಬಂಧವಿಲ್ಲದೆ ಗುಣಕೀರ್ತನೆಮಾಡುತ್ತ ಜಾಗರಣೆ ಮಾಡುವುದು;

೫. ಜಾಗರಣೆ ಮಾಡುತ್ತ ಉದ್ವೇಗಗೊಂಡು ನಿದ್ರೆ ನೀರಡಿಕೆ ಇಲ್ಲದೆ ಕೃಶನಾಗುವುದು;

೬. ಕೃಶ (ಸೊರಗು) ನಾಗುತ್ತಾ ಹೊಂದಿಕೆದಪ್ಪಿ ಪ್ರಲಾಪಿಸುವುದು.

೭. ಪ್ರಲಾಪಿಸುತ್ತಾ ಬಾಹ್ಯವಸ್ತುಗಳ ಮೇಲೆ ವಿಷಯಗಳ ಬಗ್ಗೆ ಅರುಚಿಯುಂಟಾಗುತ್ತ ಲಜ್ಜೆಹೆಜ್ಜೆದೆಗೆಯುವುದು,

೮. ಲಜ್ಜೆ ತೊರೆಯುತ್ತಾ ಮನೋರೋಗ ಪೀಡಿತನಾಗುವುದು.

೯. ಮನೋರೋಗದಿಂದ ( ಜಡತ್ವ ನಿಶ್ಚೇತನ ), ಮೂರ್ಛೆಹೊಂದು ವುದೇ ಒಂಭತ್ತನೆಯ ಅವಸ್ಥೆ (ಚೇತನವಿಹೀನನಾಗುವದು.)

೧೦. ಕೊನೆಗೆ ಹತ್ತನೆಯ ಗತಿಯಲ್ಲಿ ಮರಣವೇ ಶರಣು.

---

* ಮೇಲೆ ವಿವರಿಸಿದ ಹತ್ತನೆಯ ಸ್ಥಿತಿಯೊಂದನ್ನು ಬಿಟ್ಟು ವಿರಹದ ಒಂಭತ್ತೂ ಸ್ಥಿತಿಗಳು ಒಂದರಮೇಲೊಂದು ಒಂದೇಸವನೆ ಮಲುಹಣನಿಗೆ ಆವರಿಸಿವೆ.

# ಶುದ್ಧಾಶುದ್ಧ ಪತ್ರಿಕೆ

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೩ | ೪೩ | ಪ್ರಸಂಗಗಂಳಿಂ | ಪ್ರಸಂಗಂಗಳಿಂ |
| ೫ | ೧೦೮ | ತಾನೆ ರಕ್ಷಾಶಿಕ್ಷಕನಾಗಿ | ರಕ್ಷಶಿಕ್ಷಕನಾಗಿ |
| ೬ | ೧೨೦ | ನುಡಿ | ನುಡಿಯು |
| ೭ | ೧೪೫ | ಭ್ರೂ | ಭ್ವಾ |
| ೧೨ | ೭೨ | ಮಂದಣ | ಮುಂದಣ |
| ೧೩ | ೧೦೦ | ಮಂದೆವಾಳಂ | ಮುಂದಿವಾಳಂ |
| ೧೪ | ೧೨೨ | ನೋಟವಲ್ಲಂ | ನೋಟವೆಲ್ಲಂ |
| ೧೫ | ೧೨೯ | ತೀರ-ಮನಂತೀರೆದಿರೆ | ತೀರೆ-ಮನಂತರದಿರೆ |
| ೧೬ | ೧೮೧ | ಮಲಹಣಸಂ | ಮಲುಹಣಸಂ |
| ೨೦ | ೮೨ | ಒಲುವ × × ಗೊಂಡಲಿವ | ಒಲೆವ × × ಗಂಡಲಿವ |

---

# ಪ್ರೇಮದ ಬಳ್ಳಿಯ ಬಳಗದ ಪ್ರಕಟನೆಗಳು




ಶ್ರೀ ಮಲ್ಲಾಬಾದಿ ವೀರಭದ್ರಪ್ಪನವರಿಂದ ಸಂಪಾದಿಸಲ್ಪಟ್ಟು

ಹಿಂದೀ ಇಂಗ್ಲೀಷ ಭಾಷೆಗೆ ಪರಿವರ್ತನಗೊಂಡಿರುವ ಪರಿಷ್ಕೃತ ಎರಡನೆಯ ಮುದ್ರಣ

| | | |
|---|---|---|
| ೧. | ಶ್ರೀ ಬಸವ ಗೀತೆ ( ಪರಿಷ್ಕೃತ ೪ನೆಯ ಮುದ್ರಣ ) | |
| ೨. | ಶ್ರೀ ಅಕ್ಕನ ಗೀತೆ ( ,, ೨ನೆಯ ಮುದ್ರಣ ) | |
| ೩. | ಸರ್ಪಭೂಷಣ ಶಿವಯೋಗಿಗಳ ಚರಿತ್ರೆ | ೦—೧೨—೦ |
| ೪. | ಪುರಾತನ ಮಾತೆಯರ ಕಥೆಗಳು ( ಹರೀಶ್ವರಕೃತ ) | ೧—೦—೦ |
| ೫. | ಶ್ರೀ ಬಸವತತ್ವಪರಿಮಳ ( ದ್ವಿತೀಯ ಮುದ್ರಣ ) | ೨—೦—೦ |
| ೬. | ಮಲುಹಣದೇವ ಚರಿತೆ | ೧—೦—೦ |
| ೭. | ವೀರಶೈವ ಮಹಾ ಸಭೆ ಸುವರ್ಣಮಹೋತ್ಸವದ ಚಿತ್ರ | ೦—೮—೦ |



........ ಮುಂದಿನ ಪ್ರಕಟನೆಗಳು ........

" ಶಿಲ್ಪಕಲಾವಿದ ಶಂಭು " ಸಚಿತ್ರ ಬೇಗನೆ ಪ್ರಕಟವಾಗಲಿದೆ

ಪ್ರಕಾಶಕರು :

**ಮಲ್ಲಾಬಾದಿ ಮಹಾಂತಪ್ಪ ಸಹೋದರರು**

**ಪಂಪಾಸಾಹಿತ್ಯ ಪ್ರಕಟನಾಲಯ, ದಾವಣಗೆರೆ.**